ಹೊಂದಿ ಕಣ್ಣುಗಳು ಪ್ರಶಾಂತವಾಗಿರುತ್ತವೆ. ಆದ್ದರಿಂದ ಈ ಅಸಾಧಾರಣ ಧರ್ಮ ಹೊಂದಿರುವ ಈ ಋತುವಿಗೆ ವರ್ಷಋತು ಎಂದು ಕರೆಯಲಾಗಿದೆ.

**ಯಾವೈ**

ಯಾವ ಮನುಷ್ಯನು ಈ ಕಾಲದಲ್ಲಿ ಬಿತ್ತನೆ ಮೊದಲಾದ ವ್ಯವಸಾಯ ಕಾರ್ಯಗಳಲ್ಲಿ ಗಮನಕೊಡದೆ ನಿಷ್ಕ್ರಿಯನಾಗಿರುತ್ತಾನೋ ಅವನ ಕರ್ತವ್ಯಭ್ರಷ್ಟ ನಂತೆಯೇ ವರ್ಷವಿಡೀ ಕರ್ತವ್ಯಭ್ರಷ್ಟತೆಯಿಂದ ಕೂಡಿರುತ್ತಾನೆ.

**ಯಾಃಪ್ರತಿ**

ಯಾವ ಮನುಷ್ಯನು ಕರ್ತವ್ಯೋನ್ಮುಖನಾಗಿ ಬಿತ್ತನೆ ಮೊದಲಾದ ವ್ಯವಸಾಯ ಕಾರ್ಯಗಳಲ್ಲಿ ತೊಡಗಿರುತ್ತಾನೋ ಅವನು ಅಪಾರ ಆಹಾರ ಸಮೃದ್ಧಿಯಿಂದ ಪ್ರತಿಷ್ಠೆ ಪಡೆದವನಾಗುತ್ತಾನೆ ವರ್ಷವಿಡೀ ಸುಖಿಯಾಗಿರುತ್ತಾನೆ. ಇದು ವರ್ಷಋತುವಿನ ವಿಶೇಷ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಮೂರನೇ ಅನುವಾಕವು ಮುಗಿಯಿತು.

|| ಅಥ ಚತುರ್ಥ ಅನುವಾಕಃ ||

**ಅಕ್ಷಿ**

ವರ್ಷ ಋತುವಿನಲ್ಲಿ ಉಂಟಾದ ನೇತ್ರ ರೋಗಗಳು (ಶರದೃತುವಿನಲ್ಲಿ) ರೋಗ ನಿವಾರಣೆ ಹೊಂದಿದ ಕಣ್ಣುಗಳು ಹೇಗೆ ನಿರ್ಮಲವಾಗಿರುತ್ತವೋ ಹಾಗೆ ಮೇಘರಹಿತವಾದ ನಿರ್ಮಲಾಕಾಶದಿಂದ ಕೂಡಿ ಶರದೃತುವಿನಲ್ಲಿ ನಿರ್ಮಲವಾಗಿ ಕಾಡಿಗೆ[೧] ಮೊದಲಾದ ನೇತ್ರ ಸಂಸ್ಕಾರದಿಂದ ಹೆಚ್ಚಿನ ಅಂದದಿಂದ ಕೂಡಿರುವ ಕಣ್ಣುಗಳ ಹಾಗೆ ಈ ಋತುವಿನಲ್ಲಿ ದೃಷ್ಟಿಬಂಧಕವಾದ ಮಂಜು ಇಬ್ಬನಿಗಳ ಆವರಣವಿಲ್ಲದೆ ಜಗತ್ತು ಶುಭ್ರವಾಗಿ ಕಂಗೊಳಿಸುತ್ತದೆ. ಇದು ದೇವತೆಗಳ ಕೃಪಾಸಾಮರ್ಥ್ಯದಿಂದಲೇ ಆಗುವುದೆಂದು ತಿಳಿಯಬೇಕು.

**ಕನಕಾ**

ಶರದೃತುವಿನ ಅಧಿದೇವತೆಗಳಿಂದ ಸುವರ್ಣವರ್ಣಗಳಿಂದ ಹರಿಯದಿರುವ ವಸ್ತ್ರದಂತೆ ಹಚ್ಚಗೆ ನಿತ್ಯನೂತನವಾಗಿ ಜಗತ್ತು ಶೋಭಿಸುತ್ತದೆ. ''ಬೇರೆ ಋತುಗಳಿಗಿಂತ ಈ ಋತುವಿನಲ್ಲಿ ಸೇವಿಸುವ ಆಹಾರಕ್ಕೆ ಹೆಚ್ಚಿನ ರುಚಿಯಿದ್ದು ಶರೀರಕ್ಕೆ

---

೧ ಕಣ್ಣಿಗೆ ಹಚ್ಚುವ ಕಪ್ಪು

ಪುಷ್ಟದಾಯಕವಾಗಿರುವುದರಿಂದ ಪ್ರಯತ್ನಪೂರ್ವಕವಾಗಿ ಒಳ್ಳೆಯ ಭಕ್ಷ್ಯಭೋಜ್ಯ ಗಳನ್ನು ಸೇವಿಸಬೇಕು. ಹಾಗೆ ಮಾಡುವುದರಿಂದ ರೋಗಗಳು ದೂರವಾಗಿ ಜೀವನವು ಸುಖಮಯವಾಗಿರುತ್ತದೆ. ಶರದೃತುವಾದ ನಾನು ಇಂತಹ ಸುಖಮಯವಾದ ಜೀವನವನ್ನು ದೊರಕಿಸುತ್ತೇನೆ'' ಎಂದು ಶರದೃತು ತಿಳಿಸುತ್ತದೆ.

**ಏತಾ ವಾಚಃ**

ಶರದೃತು ಬಂದಾಗ ಭಕ್ಷ್ಯಭೋಜ್ಯಗಳನ್ನು ಸೇವಿಸಿದ ತೃಪ್ತ ಮನುಷ್ಯರ ಹಾಗೆ ಅವರ ವರ್ತನೆಯ ಹಾಗೆ ಶರದೃತುವಿನ ಋತುಧರ್ಮವೆಂದು ತಿಳಿಯಬೇಕು.

**ಅಭಿಧೂನ್ವಂತೋ**

ಹೇಮಂತ ಋತುವಿನಲ್ಲಿ ಮರುದ್ಗಣಗಳು (ವಿಶೇಷ ರೀತಿಯ ಸಮೂಹ) ಎಲ್ಲವನ್ನೂ ಕದಲಿಸುವ ಹಾಗೆ ಹೆಚ್ಚಿನ (ಚಳಿಯ) ಭಾದೆ ಕೊಡುತ್ತಾ ಗಾಳಿಯನ್ನು ತೀವ್ರವಾಗಿ ಬೀಸುತ್ತವೆ. ವಾಯುಲೋಕದಿಂದ ಆಗಮಿಸುವ ಈ ಚಳಿ ಗಾಳಿಯನ್ನ ದುರಿಸಲು ಮನುಷ್ಯರು ಬಾಣದ ಮೊನೆಯಷ್ಟು ಪ್ರಯತ್ನಪೂರ್ವಕವಾಗಿ ಸಾಮೂಹಿಕ ವೆನ್ನುವಂತೆ ಮಲಿನವಾಗಿದ್ದರೂ ದೃಢವಾಗಿರುವ ಹೊದ್ದಿಕೆಗಳನ್ನು ಹೊದ್ದು ಕೂದಲನ್ನು ಭದ್ರವಾಗಿ ಬಿಗಿದ ಹಾಗೆ ಕಾಣುತ್ತಾರೆ. ತಲೆ ಕಟ್ಟುಗಳನ್ನು ಕಟ್ಟುವವರಾಗುತ್ತಾರೆ.

**ಅಕ್ರುದ್ಧಸ್ಯ**

ಕೋಪದಿಂದ ಯುದ್ಧವನ್ನು ನಿಶ್ಚಯಿಸಿರುವವರ ಕಣ್ಣುಗಳು ಹೇಗೆ ಕೆಂಪಾಗಿ ಚಲಿಸುತ್ತಿರುವವೋ ಹಾಗೆ ಕೋಪಕ್ಕೆ ಕಾರಣವಿಲ್ಲದಿದ್ದರೂ ಈ ಹೇಮಂತ ಋತುವಿನ ಕಣ್ಣುಗಳು ಕೆಂಪಾಗಿ ಚಲಿಸುತ್ತಿರುತ್ತವೆ. ಯಾವ ಋತುವಿನ ಬಗ್ಗೆ ಏನು ಹೇಳಿದರೂ ಅದು ಜೀವಿಗಳಾಗಿ ಹೊಂದಿದಂತಿರುತ್ತದೆ. ಇದು ಹೇಮಂತ ಋತುವಿನ ಸ್ವಭಾವ.

**ದುರ್ಭಿಕ್ಷಂ**

ಅಂತರಿಕ್ಷದಲ್ಲಿ ಜಲವು ಕಂಡು ಬರುವುದಿಲ್ಲ (ಅಭಾವ). ಮನುಷ್ಯರ ಮನೆ ಗಳಲ್ಲೂ ನೀರಿನ ಅಭಾವ. ಶಿಶಿರ ಋತುವಿನ ತಾಪವನ್ನು ಅನುಭವಿಸುತ್ತಾ ಜನರು ಮನೆಗಳಲ್ಲಿರುವ ಸ್ವಲ್ಪ ನೀರಿನಿಂದ ದಾಹವನ್ನು ತಣಿಸಿಕೊಳ್ಳುತ್ತಾರೆ.

**ತಾ ಅಗ್ನಿಃ**

ಲೋಕದಲ್ಲೆಲ್ಲೂ ನೀರು ಕಾಣಸುವುದಿಲ್ಲ. ಮಾರ್ಗಸ್ಥರು(ಜನರು) ನೀರಿಗಾಗಿ ಅಲೆಯುತ್ತಿರುತ್ತಾರೆ. ಹೀಗಾದರೆ ಜೀವಿಗಳ ಗತಿಯೇನು ? ಎಂದು ನೀರಿಗಾಗಿ ಎಲ್ಲೆಡೆ ಹುಡುಕುತ್ತಿರುತ್ತಾರೆ.

**ಇಹೇಹ**

ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ವಾಯುದೇವತೆಗಳೇ, ನಿಮ್ಮಲ್ಲಿಂದ ವಿಶೇಷವಾದ ಸುಖದಾಯಕವಾದ ನೀರಿನ ಸೌಕರ್ಯವನ್ನು ಈ ಸಮಸ್ತ ಪ್ರದೇಶದಲ್ಲಿ ಉಂಟು ಮಾಡಬೇಕೆಂದು ಕೋರುತ್ತೇನೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ನಾಲ್ಕನೇ ಅನುವಾಕವು ಮುಗಿಯಿತು.

॥ ಅಥ ಪಂಚಮ ಅನುವಾಕಃ ॥

**ಅತಿತಾಮ್ರಾಣಿ**

ಶಿಶಿರ ಋತುವಿಗೆ ಅಧಿದೇವತೆಯಾದ ವಿಶ್ವೇದೇವತೆಗಳು ಅತಿ ಕೆಂಪದ (ತಾಮ್ರದ ಹಾಗೆ) ವಸ್ತ್ರವುಳ್ಳವರು. ಅವರು ಅಷ್ಟಿ, ವಜ್ರ, ಶತಘ್ನಿ ಎಂಬ ಆಯುಧ ಗಳಿಂದ ಶತೃಗಳನ್ನು ಸಂಹರಿಸುತ್ತಿದ್ದಾರೆ. ಅಲ್ಲದೆ ಅರುಣ ಕೇತುಕಾಗ್ನಿರೂಪವಾದ ಅಗ್ನಿಜಿಹ್ವೆ (ಕೆಂಪಾದ ನಾಲಗೆ) ಯುಳ್ಳವರಾಗಿ ವ್ಯಗ್ರವಾದ ಧ್ವನಿ ಮಾಡುತ್ತಿರುತ್ತಾರೆ.

**ನೈವ**

ನಮಗೆ ಸಮಾನವಾದ ದೇವತೆಗಳಿಲ್ಲ. ಮನುಷ್ಯರಿಲ್ಲ. ರಾಜನಾದ ವರುಣನೂ ಸಮರ್ಥನಲ್ಲ. ಅಗ್ನಿಯೂ, ವಾಯುವೂ ಇಂದ್ರನೂ ಯಾರೂ ಸಮಾನರಲ್ಲ. ನಮ್ಮ ಸಮಾನತರು ಒಬ್ಬರೂ ಇಲ್ಲವೆಂದು ಅಬ್ಬರಿಸುವಂತೆ ಧ್ವನಿ ಮಾಡುತ್ತಾರೆ.

**ದಿವ್ಯಸ್ಯೈಕಾ**

ವಿಶ್ವೇದೇವತೆಗಳ ನಾಲಗೆಯಂತಿರುವ ಅರುಣಕೇತುಗ್ನಿಯು ಮೇಲೆ ಮತ್ತು ಕೆಳಗೆ ಬಿಲ್ಲಿನ ಎರಡು ಕೊಪ್ಪಿಯಂತೆ (ಮೂಲೆಗಳಂತೆ) ಆಕಾಶವನ್ನೂ ಭೂಮಿ ಯನ್ನೂ ವ್ಯಾಪಿಸಿದ್ದು ಇಂದ್ರನು ಇದನ್ನು ಕಂಡು ಹೆದರಿ ಗೆದ್ದಲಿನ ರೂಪ ತಾಳಿ ತಾನೇ ಧನುಸ್ಸಿನ (ಬಿಲ್ಲಿನ) ನಾರಾಚ (ಹುರಿ)ವನ್ನು ಕತ್ತರಿಸಿ ಹಾಕಿದನು. (ಇಂದ್ರನಿಗೆ ತನಗಿಂತ ಬಲಶಾಲಿಗಳೆಂದರೆ, ಅವರಿಂದ ಇಂದ್ರಪದವಿ ಎಲ್ಲಿ ಹೋಗುವುದೋ ಎಂಬ ಭಯ)

**ತದಿಂದ್ರ**

ಆ ಧನುಸ್ಸೇ ಮೋಡಗಳ ಮಧ್ಯೆ ಚಿತ್ರ ವಿಚಿತ್ರ ಬಣ್ಣಗಳಿಂದ ಕೂಡಿ ಇಂದ್ರ ಧನುಸ್ಸೆಂದು (ಕಾಮನಬಿಲ್ಲು) ಕಾಣಿಸಿಕೊಂಡಿತು. ಈ ಧನುಸ್ಸು ಬೃಹಸ್ಪತಿಯ ಮಗ ಶಂಯು ಎಂಬುವನಿಗೆ ಸಿಕ್ಕಿ ಅವನು ಅದರಿಂದ ತನ್ನ ಕಾರ್ಯಗಳನ್ನು ನೆರವೇರಿಸಿ ಕೊಂಡನು. ಹಾಗಾಗಿ ಆ ಧನುಸ್ಸು ಅರುಣಕೇತುಕಾಗ್ನಿಯ ಧನುವೆನಿಸಿತು.

### ರುದ್ರಸ್ಯ

ಕತ್ತರಿಸಲ್ಪಟ್ಟ ನಾರಾಚವುಳ್ಳ ಆ ಧನುಸ್ಸು ಇಂದ್ರನ ಸ್ವಾಧೀನವಾದದ್ದಷ್ಟೇ ಅಲ್ಲ, ನಾರಾಚವು ಕತ್ತರಿಸಿ ಹೋದದ್ದರಿಂದ ಧನುಸ್ಸಿನ ಮೇಲ್ತುದಿಯು ಮೇಲಕ್ಕೆ ಚಿಮ್ಮಿ ಅರುಣಕೇತುಕಾಗ್ನಿಯ ತಲೆ ಕತ್ತರಿಸಿ ಎಸೆಯಲ್ಪಟ್ಟು ಕೆಳಗೆ ಬಿದ್ದು ಯಜ್ಞಕಾರ್ಯ ಗಳಲ್ಲಿ ಹವಿಸ್ಸಾಗಿ ಬಳಸುವ ಪ್ರವರ್ಗ್ಯವೆಂಬ ವಿಶೇಷ ಪದಾರ್ಥವಾಯಿತು. ಆದ್ದರಿಂದ ಅಂತಹ ಪ್ರವರ್ಗ್ಯವಿರುವ ಯಜ್ಞವನ್ನು ಯಾರು ಮಾಡುತ್ತಾರೋ ಅಂತಹವರಿಂದ ಅರುಣಕೇತಾಗ್ನಿಯ ಶಿರಸ್ಸು ಜೋಡಿಸಲ್ಪಡುತ್ತದೆ. ಈ ವಿಷಯವನ್ನು ಯಾರು ಅರಿತುಕೊಳ್ಳುವರೋ ಅಂತಹವರನ್ನು ಅರುಣಕೇತುಕಾಗ್ನಿಯು ಹಿಂಸೆ ಮಾಡುವುದಿಲ್ಲ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಐದನೆಯ ಅನುವಾಕವು ಮುಗಿಯಿತು.

॥ ಅಥ ಷಷ್ಠೋಽನುವಾಕಃ ॥

### ಆತ್ಯೂರ್ಧ್ವಾ

ಶಿಶಿರ ಋತುವಿನ ಅಧಿಕ ಚಳಿಯಿರುವ ದಿನಗಳಲ್ಲಿ ಜನಗಳು ಶರೀರವನ್ನು ಮುದುರಿಕೊಂಡು ತಮ್ಮ ಕೈಗಳಿಂದ ವಕ್ಷಸ್ಥಳವನ್ನು ಭದ್ರವಾಗಿ ಅಪ್ಪಿ ಹಿಡಿದು ನಿಟ್ಟುಸಿರು ಬಿಡುತ್ತಾ ಮೇಲುಗಡೆ ದೃಷ್ಟಿ ಹರಿಸಿರುತ್ತಾದ್ದರಿಂದ ಅತ್ಯೂರ್ಧ್ವಾಕ್ಷಿಗಳೆಂದೆನಿಸುತ್ತಾರೆ. ಅಲ್ಲದೆ ಚಳಿಯಿಂದಾಗಿ ಎಡಕ್ಕಾಗಲೀ ಬಲಕ್ಕಾಗಲೀ ಎತ್ತಕಡೆಗೂ ನೋಡದೆ ಆಕಾರ ರೂಪಗಳನ್ನು ಗಮನಿಸದೆ ಮಿದು, ಒರಟುಗಳನ್ನಾಗಲೀ, ಸುಮದರ ವಸ್ತ್ರವನ್ನಾಗಲೀ ಕಣ್ಣಿಗೆ ಅಂದ ಕಾಣುವ ವಸ್ತುಗಳನ್ನು ಅಪೇಕ್ಷಿಸು ವುದಾಗಲೀ ಇಲ್ಲದೇ ಚಳಿಯನ್ನು ಹೋಗಲಾಡಿಕೊಳ್ಳುವುದಷ್ಟನ್ನೇ ಅಪೇಕ್ಷಿಸುತ್ತಾರೆ.

### ಅನ್ಯೋನ್ಯಂ

ಪರಸ್ಪರ ದ್ವೇಷವಿದ್ದರೂ ಚಳಿಯನ್ನು ಹೋಗಲಾಡಿಸುವುದರತ್ತಲೇ ಹೊರತು ಪರಸ್ಪರ ದ್ವೇಷವನ್ನು ಹೆಚ್ಚಿಸುವತ್ತ ಗಮನ ಕೊಡರು. ಹೆಣ್ಣು ಗಿಳಿಯ ತಲೆಯ ಬಣ್ಣದ ಹಾಗೆ ಸೂರ್ಯೋದಯ ಕಾಲದಲ್ಲಿ ಶಿಶಿರ ಋತುವಿನ ಅಧಿದೇವತೆಯ ಕಣ್ಣಿನ ಹಾಗೆ ಕಣ್ಣುಗಳು ಕೆಂಪಾಗಿರುತ್ತವೆ. ಈ ರೀತಿಯ ಅಸಾಧಾರಣ ಧರ್ಮವುಳ್ಳದ್ದು ಶಿಶಿರ ಋತು.

### ತ್ವಂ ಕರೋಷಿ

ಶಿಶಿರ ಋತುವಿನಲ್ಲಿ ಚಳಿಯನ್ನು ಹೋಗಲಾಡಿಸಲು ಮೊಳಕಾಲೂರಿ ಕುಳಿತು ಕೈ ಬೊಗಸೆಯನ್ನು ಕೆಳಮುಖ ಮಾಡಿ ವಕ್ಷ ಸ್ಥಳದ (ಎದೆ) ಭಾಗವನ್ನು ಬೆಂಕಿಯ

ಶಾಖಕ್ಕೊಡ್ಡಿ ಕಾಯಿಸಿಕೊಳ್ಳುತ್ತಿರುತ್ತಾರೆ. ವೃದ್ಧರೂ, ಚಿಕ್ಕಮಕ್ಕಳನ್ನು ಕೂರಿಸಿಕೊಂಡು ಕಾಯಿಸಿಕೊಳ್ಳುತ್ತಿರುತ್ತಾರೆ. ಇದು ಶಿಶಿರಋತುವಿನ ಸ್ವಭಾವ ಧರ್ಮ.

**ತಸ್ಮೈ**

ಯಾವ ಮನುಷ್ಯನು ಈ ರೀತಿ ಸಂವತ್ಸರದಲ್ಲಿನ ಈ ಹಿಂದೆ ತಿಳಿಸಿದ ಋತು ಧರ್ಮಗಳ ಕರ್ಮವನ್ನು ಆಚರಿಸುತ್ತಾನೋ ಅವನಿಗೆ ಸಮಸ್ತ ಋತುಗಳೂ ಸ್ವಾಧೀನವಾಗುವುದಲ್ಲದೆ ಬ್ರಾಹ್ಮಣನೆನಿಸಿ ಗೌರವವನ್ನು ಗಳಿಸುತ್ತಾನೆ. ಬ್ರಾಹ್ಮಣರಲ್ಲಿ ಶ್ರೇಷ್ಠ ಎನಿಸುತ್ತಾನೆ ಮತ್ತು ಮರಣ ಹೊಂದಿದ ನಂತರ ಸೂರ್ಯರೂಪನಾದ ಅರುಣ ಕೇತುಕಾಗ್ನಿಯಲ್ಲಿ ಐಕ್ಯನಾಗುತ್ತಾನೆ. ಮತ್ತು ಈ ಹಿಂದೆ ಹೇಳಲ್ಪಟ್ಟ ವಸಂತಾದಿ ಋತುಗಳ ಅಧಿದೇವತೆಗಳಾದ ವಸುಗಳು, ರುದ್ರರು, ವಿಶ್ವೇದೇವತೆಗಳು ಮೊದಲಾದ ಸೇನಾಧಿಪತಿ ಗಳೊಡನೆ ಸಂಚರಿಸುತ್ತ ಕರ್ಮವನ್ನಾಚರಿಸುವ ಯಜಮಾನನಿಗೆ ಅವನ ಸಮಸ್ತ ಕೋರಿಕೆಗಳನ್ನು ನೆರವೇರಿಸುತ್ತಾನೆ. ಅಂತಹ ಜ್ಞಾನಿಯ ತಾದಾತ್ಮ್ಯ ಹೊಂದಿದ ಅರುಣಕೇತುಕಾಗ್ನಿಯು ದ್ರವರೂಪದಲ್ಲಿ ಮೈತೋರಿ ಮಳೆ ಸುರಿಸುತ್ತಾನೆ. ಆದ್ದರಿಂದ ಈ ಮಂತ್ರವು ಅರುಣಕೇತುಕಾಗ್ನಿ ಯನ್ನು ಪ್ರತಿಪಾದಿಸುತ್ತದೆ.

**ಆವದ್ರಪ್ಸೋ**

ದ್ರವಸ್ವರೂಪವಾದ ಅರುಣಕೇತುಕಾಗ್ನಿಯು ತನ್ನ ಅನೇಕ ಕಿರಣಗಳಿಂದ ಪ್ರಕಾಶಿಸುತ್ತಾ ಮಳೆಗೆ ಕಾರಣವಾಗಿ ಭೂಮಿಯಲ್ಲಿ ವ್ಯಾಪಿಸಿದ್ದಾನೆ. ಹೇ, ಅರುಣ ಕೇತುಕಾಗ್ನಿಯೇ ನೀನು ಮಳೆಯ ಅಧಿಪತಿಯಾದ ಕಾರಣ ಮನುಷ್ಯರಿಗೆ ಅವಶ್ಯ ವೆನಿಸಿದಾಗೆಲ್ಲ ಮಳೆ ಸುರಿಸು. ಮಳೆಯಿಂದ ಭೂಮಿಯೆಲ್ಲಾ ಆವೃತವಾಗಲಿ. ಅಂದರೆ ಯಥೇಚ್ಛವಾಗಿ ಮಳೆ ಸುರಿಯಲಿ ಎಂದು ಅರುಣಕೇತುಕಾಗ್ನಿಯನ್ನು ಧ್ಯಾನಿಸಬೇಕು.

**ಏತಯೈವ**

ವರ್ಷಾಧಿಪತಿಯಾದ ಅರುಣಕೇತುಕಾಗ್ನಿಯು ಜಲದಾನವನ್ನು ಅಪೇಕ್ಷಿಸು ತ್ತಿರುವ ಭೂಮಿಯ ಕಾರಣದಿಂದ ಪ್ರಾಣಗಳನ್ನು ಸಂತೋಷಗೊಳಿಸಲೋಸುಗ ಮೋಡಗಳು ಆಕಾಶವನ್ನೆಲ್ಲಾ ವ್ಯಾಪಿಸುವಂತೆ ಮಾಡುತ್ತಿದ್ದಾನೆ. ಸಂವತ್ಸರಾಧಿಪತಿಯಾಗಿ ಅರುಣ ಕೇತುಕಾಗ್ನಿಯು ಓಷಧಿಗಳಿಂದ ಆವೃತವಾಗಿರುವ ಭೂಮಿಯನ್ನೂ ಆಕಾಶವನ್ನೂ ಅಧಿಷ್ಠಿಸುತ್ತಾನೆಂಬುದಾಗಿ ಅವನ ಮಹಿಮೆಯನ್ನು ಬಲ್ಲ ಯಜಮಾನರು ಒಬ್ಬರಿಗೊಬ್ಬರು ಅಪಚಾರ ಮಾಡಬಾರದು. ಹಾಗೆ ಅಪಚಾರ ಮಾಡಿದಲ್ಲಿ ಉತ್ತಮ ಲೋಕವನ್ನು ಹೊಂದದವರಾಗುತ್ತಾರೆ. ಈ ರೀತಿಯಾಗಿ ಋತುಸ್ವಭಾವಗಳನ್ನು ಕುರಿತು, ಸೂರ್ಯನ ಸ್ವಭಾವವನ್ನು ಕುರಿತು ಮಂತ್ರಗಳು ಸಾರುತ್ತವೆ. ಬ್ರಾಹ್ಮಣಗಳು ಸಾರುತ್ತವೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಆರನೇ ಅನುವಾಕವು ಮುಗಿಯಿತು.

|| ಅಥ ಸಪ್ತಮ ಅನುವಾಕಃ ||

**ಆರೋಗೋ**

ಆರೋಗ, ಭ್ರಾಜ, ಪಟರ, ಪತಂಗ ಸ್ವರ್ಣರ ಜ್ಯೋತಿಷೀಮಾನ್ ಮತ್ತು ವಿಭಾಸ ಎಂಬ ಹೆಸರಿನ ಏಳು ಜನ ಸೂರ್ಯರಿದ್ದಾರೆ. ಈ ಏಳು ಜನ ಸೂರ್ಯರೂ ಪ್ರಾಣಿಗಳಿಗೆ ಅನುಕೂಲ ಆಗುವಂತೆ ಮಳೆಯ ಮೂಲಕ ಅನ್ನಾಹಾರಗಳನ್ನುಂಟು ಮಾಡುವುದಕ್ಕೆ ಆಕಾಶವನ್ನು ವ್ಯಾಪಿಸಿ ಭೂಲೋಕದ ಒಳಿತಿಗೆಂದೇ ಪ್ರಕಾಶಿಸುತ್ತಿದ್ದಾರೆ.

**ಕಶ್ಯಪೋ**

ಕಶ್ಯಪನೆಂಬುವನು ಎಂಟನೆಯ ಸೂರ್ಯ. ಅವನು ಶ್ರೇಷ್ಠವಾದ ಮೇರುಪರ್ವತ ವನ್ನು ಬಿಟ್ಟು ಬರುವುದಿಲ್ಲ. ಅವನ ಕುರಿತಾಗಿ ಮುಂದೆ ಹೇಳಲಾಗುತ್ತದೆ.

**ಯತ್ತೇ ಶಿಲ್ಪ**

ಎಂಟನೆಯ ಸೂರ್ಯನಾದ ಕಶ್ಯಪನನ್ನು ಕುರಿತು ಹೇ ಕಶ್ಯಪ ಯಾವ ಆರೋಗನೇ ಮೊದಲಾದ ಏಳು ಜನ ಸೂರ್ಯರು ಜಗತ್ಪ್ರಕಾಶಕರವಾದ ಅನೇಕ ವಿಧವಾದ ಕಿರಣಗಳಿಂದ ಚಿತ್ರವಿಚಿತ್ರವಾಗಿ ಕಂಗೊಳಿಸುತ್ತಾ ಪೂರ್ಣರೂಪದಲ್ಲಿ ಇಂದ್ರಿಯಗಳಿಗೆ ಪುಷ್ಟಿ ಕೊಡುವ ಮೂಲಕ ಜಗತ್ತನ್ನು ಪ್ರಕಾಶಿಸುವಂತೆ ಮಾಡುತ್ತಿದ್ದಾರೋ, ನಿಮ್ಮನ್ನು ಭಾವಿಸುವ ಯಜಮಾನನನ್ನು ಕಾಂತಿಯಿಂದ ಕೂಡಿದವನನ್ನಾಗಿ ಮಾಡುತ್ತಿದ್ದಾರೋ ಅದಕ್ಕೂ ಮಿಗಿಲಾದ ಉತ್ಕೃಷ್ಟ ಸ್ಥಾನ ಪಡೆಯುವಂತೆ ಮಾಡು ಎಂದು ಪ್ರಾರ್ಥಿಸು ವುದರಿಂದ ಕಶ್ಯಪನೆಂಬ ಸೂರ್ಯನ ಪ್ರಭಾವ ಮಹಿಮೆಗಳು ಎಷ್ಟೆಂದು ತಿಳಿಯುತ್ತದೆ.

**ತೇಅಸ್ಮೇ**

ಈ ಹಿಂದೆ ತಿಳಿಸಿದ ಏಳು ಜನ ಸೂರ್ಯರೂ ಈ ಜಗತ್ತಿಗೆ ಪ್ರಕಾಶ ಕೊಡಲು ಕಶ್ಯಪನಿಂದ ಕಾಂತಿಯನ್ನು ಪಡೆದರು. ಸೋಮನೆಂಬ ದೇವತೆಯು ಈ ಏಳು ಜನರನ್ನೂ ಕಶ್ಯಪನಲ್ಲಿಗೆ ಕರೆದೊಯ್ದು ಅವರಲ್ಲಿದ್ದ ಮಾಲಿನ್ಯವನ್ನೆಲ್ಲ ದೂರ ಮಾಡಿಸಿದ್ದರಿಂದ ಅವರುಗಳು ತಿದಿಯಿಂದ ಊದಲ್ಪಟ್ಟು ಬೆಂಕಿಯಲ್ಲಿ ಕರಗಿದ ಬಂಗಾರದ ಹಾಗೆ ಶೋಭಿಸಿದರು. (ಕಶ್ಯಪನು ಆ ಏಳು ಜನ ಸೂರ್ಯ ಮಲಿನತೆಯನ್ನು ಹೋಗಲಾಡಿಸಿ ಪುಟಕ್ಕಿಟ್ಟ ಬಂಗಾರದ ಹಾಗೆ ಅವರು ಪ್ರಕಾಶಿಸುವಂತೆ ಮಾಡಿದನು.)

**ಪ್ರಾಣೋ**

ಕೆಲವರು ಆಚಾರ್ಯರು ಮೂಗಿನ ಮುಖಾಂತರ ಸಂಚರಿಸುವ ಪ್ರಾಣವಾಯುವು ಏಳು ವೃತ್ತಗಳ ಮೂಲಕ ಸಂಚರಿಸುವುದರಿಂದ ಏಳು ಜನ ಸೂರ್ಯರಾದರೆಂದೂ ಮತ್ತೆ ಕೆಲವರು ಆಚಾರ್ಯರು ಜೀವನಿಗೆ ಕಾರಣವಾದ ಮಹತ್ತು ಅಹಂಕಾರ ಹಾಗೂ ಪಂಚಭೂತಗಳೂ ಈ ಏಳೂ, ಏಳು ಜನ ಸೂರ್ಯರೆಂದೂ, ಯಾರು ಏನೇ ಹೇಳಿದರೂ ಶರೀರ ತತ್ವಗಳನ್ನು ಸೂರ್ಯನೆಂದು ಭಾವಿಸಿದರಾದ್ದರಿಂದ ಇಲ್ಲಿ ಹೇಳಿರುವ ಸೂರ್ಯಸ್ವರೂಪವು ಜಗತ್ತನ್ನು ಬೆಳಗಿಸುವ ಪ್ರತ್ಯಕ್ಷ ಸೂರ್ಯನನ್ನು ಕುರಿತ ವಿಷಯವಲ್ಲ.

**ಅಪಶ್ಯ ಮಹ**

ವತ್ಸ ಮಹರ್ಷಿಯ ಮಗನಾದ ಪಂಚಕರ್ಣನು (ವಾತ್ಸಾಯನನು) ಪ್ಲಕ್ಷ ಮಹರ್ಷಿಯ ಮಗನಾದ ಸಪ್ತಕರ್ಣನೂ (ಪ್ಲಾಕ್ಷಿ) ಈ ಏಳು ಸೂರ್ಯರನ್ನು ನೋಡಿರುವುದಾಗಿ ಹೇಳಿದರು. ಅಲ್ಲದೆ ಅವರಿಬ್ಬರೂ ಕಶ್ಯಪನೆಂಬ ಎಂಟನೆಯ ಸೂರ್ಯನಿದ್ದಾನೆಂದು ತಮ್ಮ ಗುರುಗಳಿಂದ ಕೇಳಿ ತಿಳಿದಿದ್ದೇವಾಗಲೀ ನೋಡಿದವರಲ್ಲವೆಂದು ಮಹೋನ್ನತವಾದ ಮೇರು ಪರ್ವತದಲ್ಲಿರುವ ಕಶ್ಯಪನೆಂಬ ಸೂರ್ಯನನ್ನು ನೋಡ ಹೋಗಲು ಸಮರ್ಥರಾಗಲಿಲ್ಲವೆಂದು ತಿಳಿಸಿದರು.

**ಅಪಶ್ಯ**

ಆ ಪಂಚಕರ್ಣ ಹಾಗೂ ಸಪ್ತಕರ್ಣರಿಗೆ ಪ್ರಾಣತ್ರಾತನೆಂದು ಹೆಸರಾದ ಗರ್ಗ ಋಷಿಯ ಮಗನು, ನಾನು ಆ ಮಹಾಮೇರು ಪರ್ವತದಲ್ಲಿನ ಕಶ್ಯಪನೆಂಬ ಸೂರ್ಯನನ್ನು ನೋಡಿದ್ದೇನೆ ಎಂದೂ ಮೇರುಪರ್ವತವನ್ನು ಬಿಟ್ಟು ಬರದಿರುವ ಆ ಕಶ್ಯಪ ಸೂರ್ಯನನ್ನು ನೋಡಲು ನೀವಿಬ್ಬರೂ ಮೇರು ಪರ್ವತಕ್ಕೆ ಹೋಗಿರೆಂದು ತಿಳಿಸಿದನು.

**ಭ್ರಾಜ**

ಆರೋಗನೆಂಬ ಸೂರ್ಯನು ನಮ್ಮೆಲ್ಲರಿಗೂ ಪ್ರತ್ಯಕ್ಷ ರೂಪನಾಗಿದ್ದು ಪ್ರಕಾಶಿಸುತ್ತಿರುವುದರಿಂದ ಆ ಕುರಿತು ಹೇಳಬೇಕಾದ್ದೇನಿಲ್ಲ ಭ್ರಾಜ ಪಟರ ಮತ್ತು ಪತಂಗ ಈ ಮೂವರೂ ಸೂರ್ಯರೂ ಮೇರು ಮಾರ್ಗಕ್ಕೆ ಕೆಳಮುಖವಾಗಿ ಕಿರಣಗಳನ್ನು ಹರಿಸಿ ಈ ಲೋಕಕ್ಕೆ ಬೆಳಕು ನೀಡುತ್ತಿದ್ದಾರೆ. ಉಳಿದ ಸ್ವರ್ಣದ ಜ್ಯೋತಿಷ್ಮಂತ ಮತ್ತು ವಿಭಾಸರೆಂಬ ಸೂರ್ಯರು ಮೇರು ಮಾರ್ಗದಲ್ಲಿ ಊರ್ಧ್ವ ಮುಖರಾಗಿ ಕಿರಣಗಳನ್ನು ಹರಿಸಿ ಮೇಲ್ಭಾಗದಲ್ಲಿ ಪ್ರಕಾಶಿಸುತ್ತಿದ್ದಾರೆ. ಆದ್ದರಿಂದ ಈ ಮಧ್ಯೆ ಅಂದರೆ ಅಧೋಮುಖ ಮತ್ತು ಊರ್ಧ್ವಮುಖ ಈ ಎರಡರ ಮಧ್ಯೆ ಹೆಚ್ಚಿನ

ತಾಪವಿಲ್ಲದಿರುವ ಕಾರಣ ನೀವು ಈ ಮಧ್ಯಮ ಮಾರ್ಗದಲ್ಲಿ ಮೇರುಪರ್ವತಕ್ಕೆ ಹೋಗಬಹುದು ಎಂದು ತಿಳಿಸಿದನು.

**ತೇಷಾ**

ಈ ಮಂತ್ರದಿಂದ ಆ ಸೂರ್ಯರುಗಳ ಮಹಿಮೆಯನ್ನು ವರ್ಣಿಸಿದಂತಾಯಿತು.

**ಸಪ್ತ ಸೂರ್ಯ**

ಆರೋಗ ಮೊದಲಾದ ಏಳು ಜನ ಸೂರ್ಯರೂ ಕ್ರಮವಾಗಿ ಆಕಾಶವನ್ನು ವ್ಯಾಪಿಸಿದ್ದು, ಶಾಸ್ತ್ರೋಕ್ತವಾಗಿ ಯಜ್ಞಾದಿ ಕರ್ಮಗಳನ್ನು ನಿರ್ವಹಿಸಿ ವಿಧಿವತ್ತಾಗಿ ದಕ್ಷಿಣಾದಿಗಳಿಂದ ಸತ್ಕರಿಸಿ ಜನ್ಮಾಂತರದ ಅರುಣ ಕೇತುಕಾಗ್ನಿಯನ್ನು ತಾದಾತ್ಮ್ಯ ವಾಗಿಸಿಕೊಂಡು ಮೆರುಮಾರ್ಗದಲ್ಲಿ ಸುಖಕರವಾದ ಮಧ್ಯಮ ಮಾರ್ಗವನ್ನನುಸರಿಸಿ ನಡೆಯುತ್ತಿದ್ದಾಗ (ಆ ಏಳು ಜನ ಸೂರ್ಯರೂ) ಯಜಮಾನನನ್ನು ''ಹೀಗೆ ದಯ ಮಾಡಿ, ಇಲ್ಲಿ ಕುಳಿತುಕೊಳ್ಳಿ, ಈ ವಸ್ತುಗಳನ್ನು ಭುಂಜಿಸಿ'' ಎಂದು ಪ್ರಿಯವಾದ ವಾಕ್ಯಗಳಿಂದ ಅತಿಯಾದ ಶೀತೋಷ್ಣರಹಿತವಾದ ಹಿತವಾದ ಘೃತವೇ ಮೊದಲಾದ ಅತ್ಯುತ್ತಮವಾದ ಪೂರ್ಣವಾದ ಆಹಾರವನ್ನು ಕೊಡುತ್ತಾ ಮೇರು ಮಾರ್ಗವು ಯಜಮಾನನಿಗೆ ಅನುಕೂಲವಾಗುವಂತೆ ಪ್ರಕಾಶಿಸುತ್ತಿರುತ್ತಾರೆ.

**ಸಪ್ತ**

ಯಜ್ಞಕಾರ್ಯಗಳಲ್ಲಿರುವ ಹೋತ, ಪ್ರಶಾಸ್ತ, ಬ್ರಾಹ್ಮಣಾಚ್ಛಂಸ, ಪೋತಾ, ನೇಷ್ಟ, ಅಚ್ಛಾವಾಹ ಮತ್ತು ಅಗ್ನೀಧ್ರವೆಂಬ ಏಳು ಜನ ಋತ್ವಿಜರೇ ಏಳು ಜನ ಸೂರ್ಯರು ಎಂದು ಕೆಲವು ಆಚಾರ್ಯರು ಹೇಳಿದರು.

**ತೇಷಾ**

ಈ ಮುಂದೆ ಹೇಳಲಿರುವ ಋಕ್ಕುಗಳಿಂದ ಈ ಏಳು ಜನ ಋತ್ವಿಜರೇ ಏಳು ಜನ ಸೂರ್ಯರೆಂದು ಪ್ರತಿಪಾತಿತವಾಗುತ್ತಿದೆ.

**ಸಪ್ತದಿಶೋ**

ಆಗ್ನೇಯ ದಿಕ್ಕಿನಿಂದ ಈಶಾನ್ಯದವರೆಗಿನ ಏಳು ದಿಕ್ಕುಗಳು ಅನೇಕ ಸೂರ್ಯ ರನ್ನುಳ್ಳವಾಗಿದ್ದು ಅವರೇ ಹೋತೃವೇ ಮೊದಲಾದ ಏಳು ಜನ ಸೂರ್ಯರೆಂದೆನಿಸಿ ಕೊಂಡಿದ್ದರು. ಆ ಏಳು ಜನ ಋತ್ವಿಜರೇ ದೇವತೆಗಳಾಗಿ ಸೂರ್ಯರೆಂದು ಕರೆಯಲ್ಪಡುತ್ತಿದ್ದಾರೆ. ಹೇ ಸೋಮ, ಸಪ್ತ ಹೋತೃ ಸ್ವರೂಪರಾದ ಆದಿತ್ಯರಿಂದ ನಾವು ರಕ್ಷಿಸಲ್ಪಡುವಂತೆ ಮಾಡು.

**ತದಪ್ಯಾ**

ಏಳು ದಿಕ್ಕುಗಳಲ್ಲಿ ಅನೇಕ ಸೂರ್ಯರಿರುವರೆಂದೂ ವೇದಗಳು ಹೇಳುತ್ತವಾಗಲೀ ಪ್ರತ್ಯಕ್ಷವಾಗಿ ನೋಡಿಲ್ಲ ಮಾತ್ರ. ಆದರೂ ಅನೇಕ ಸೂರ್ಯರಿರುವರೆಂಬುದಕ್ಕೆ ಒಂದು ಉಕ್ತಿ ಇದೆ. ಯಾವ ಯಾವ ದಿಕ್ಕಿನಲ್ಲಿ ಯಾವ ಯಾವ ಋತು ಧರ್ಮವುಂಟಾದರೂ ಅದು ಆಯಾ ದಿಕ್ಕಿನ ಸೂರ್ಯನ ಪ್ರಕಾಶವಿಲ್ಲದೆ ಆಗುವುದಿಲ್ಲ. ಆದ್ದರಿಂದ ಅನೇಕ ಸೂರ್ಯರಿದ್ದಾರೆಂಬ ಉಕ್ತಿಯನ್ನು ಒಪ್ಪಿಕೊಳ್ಳ ಬೇಕಾಗುತ್ತದೆ.

**ಏತಯ್ಯೈವಾ**

ಎಲ್ಲಿ ಋತುಧರ್ಮ ಪ್ರವರ್ತಿಸುವುದೋ ಅಲ್ಲಿ ಆಯಾ ಋತುಧರ್ಮ ಪ್ರವರ್ತಕರಾದ ಸೂರ್ಯರಿರುವುದರಿಂದ ಅನಂತ ಸೂರ್ಯತ್ವನ್ನಂಗೀಕರಿಸ ಬೇಕಾದ್ದರಿಂದ ಸಪ್ತ ಸೂರ್ಯರಿದ್ದಾರೆಂದು ಹೇಳುವುದರಲ್ಲಿ ಆಶ್ಚರ್ಯವಾದರೂ ಏನು ಎಂದು ವೈಶಂಪಾಯನರು ಹೇಳಿದ್ದಾರೆ.

**ತಸ್ಸ್ಯೈಷಾ**

ಹಾಗೆಯೇ ಆಗುತ್ತದೆ

**ಯದ್ಯಾವ**

ಹೇ ! ವಜ್ರಾಯುಧಧರನಾದ ಇಂದ್ರನೇ ! ನೂರು ಸ್ವರ್ಗಲೋಕಗಳೂ ನೂರು ಭೂಲೋಕಗಳೂ ಇವೆಯೆಂದು ಶ್ರುತಿಗಳು ಸಾರುತ್ತವೆ. ಹಾಗಿರುವುದರಿಂದ ಪ್ರತಿಯೊಂದು ಸ್ವರ್ಗ ಮತ್ತು ಭೂಮಿಯನ್ನು ನೀನು ವ್ಯಾಪಿಸಿಯೇ ಇರುತ್ತಿಯೆ. ಈ ರೀತಿ ವ್ಯಾಪಿಸಿರುವ ನಿನ್ನನ್ನು ಅನುಸರಿಸಿ ಅನಂತ ಸೂರ್ಯರು ಎಲ್ಲಾ ಕಡೆಯೂ ವ್ಯಾಪಿಸಿದ್ದಾರೆಂಬುದು ನಿಶ್ಚಯವೆಂದು ಈ ಋಕ್ಕು ಪ್ರತಿಪಾದಿಸುತ್ತದೆ.

**ನಾನಾ ಲಿಂಗತ್ವಾ**

ಒಬ್ಬನೇ ಸೂರ್ಯನೆಂದ ಕಾರಣ ವಸಂತಋತು ಮೊದಲಾದ ಆರು ಋತುಗಳ ಧರ್ಮಭೇದಗಳಿರುವುದಾದರೂ ಆ ಆರು ಋತುಧರ್ಮಗಳ ಪ್ರವರ್ತಕನೆಂದು ಆಯಾ ಸೂರ್ಯರಿರುವುದರಿಂದಲೇ ವಸಂತ ಸೂರ್ಯತ್ವವೂ ಅಂಗೀಕರಿಸಲ್ಪಟ್ಟಿದೆ.

**ಅಷ್ಟೌತು**

ಎಂಟನೆಯ ಸೂರ್ಯನಿರುವುದಾಗಿ ನಿಶ್ಚಯಿಸಲ್ಪಟ್ಟಿತೆಂದು ಹೇಳಲಾಯಿತು. ಈ ಹಿಂದೆ ಎಂಟು ಜನ ಸೂರ್ಯರೆಂದೂ ಹೇಳಲಾಯಿತು. ಈಗ ಅನೇಕ ಸೂರ್ಯರೆಂದೂ ಹೇಳಲಾಗಿದೆ. ಈ ಎರಡು ವಿರೋಧಾಭಿಪ್ರಾಯದ ಕುರಿತು ಪ್ರಶ್ನಿಸಿದ್ದರಿಂದ

ಅನೇಕ ಸೂರ್ಯರಿದ್ದರೂ ಅವರುಗಳನ್ನು ಶಾಸ್ತ್ರಾಧಾರ ಮತ್ತು ಯುಕ್ತಾಯುಕ್ತವಾಗಿ ನಿರ್ಧರಿಸಿದರೂ ಅವರಾರನ್ನೂ ನೋಡಿಲ್ಲ. ಆರೋಗನೇ ಮೊದಲಾದ ಏಳು ಜನ ಸೂರ್ಯರನ್ನೂ ಮಾತ್ರವೇ ನೋಡಿರುವುದಾಗಿ ವಾತ್ಸ್ಯಾಯನನೂ, ಪ್ಲಾಕ್ಷಿಯೂ, ಹೇಳಿದ್ದು ಎಂಟನೆಯವನಾದ ಕಶ್ಯಪನನ್ನು ನಾನು ನೋಡಿದ್ದೇನೆಂದು ಗಾರ್ಗ್ಯನು ಹೇಳಿರುವುದರಿಂದಲೂ ಪೂರ್ವಾಪರ ದೃಷ್ಟಿಯಿಂದ ಸೂರ್ಯರು ಎಂಟು ಜನರೆಂದು ಸಮನ್ವಯಿಸಲಾಗಿದೆ.

**ಸೂರ್ಯಮಂಡಲಾ**

ಪಂಚಕರ್ಣ (ವಾತ್ಸಾಯನ) ಸಪ್ತಕರ್ಣ (ಪ್ಲಾಕ್ಷಿ) ಹಾಗೂ ಪ್ರಾಣತ್ರಾತ (ಗಾರ್ಗ್ಯ)ರು ತಾವು ನೋಡಿದೆವೆಂದೂ ಹೇಳಿದ ಕಾರಣ ಅಂತರಿಕ್ಷದಲ್ಲಿ ಎಂಟನೆಯ ಸೂರ್ಯನಿರುವನೆಂದು ನಿಶ್ಚಯಿಸಲ್ಪಟ್ಟು ಆ ಸೂರ್ಯಮಂಡಲವನ್ನು ಕುರಿತೇ ಮುಂದೆ ಹೇಳಲ್ಪಡುವ ಮಂತ್ರವು ಪ್ರತಿಪಾದಿಸುತ್ತದೆ.

**ಚಿತ್ರಂ ದೇವಾನಾಂ**

ಅನೇಕ ರೀತಿಯಲ್ಲಿ ಚಿತ್ರ ವಿಚಿತ್ರವಾಗಿ ದೇವತೆಗಳಿಗೆ ಸೈನ್ಯದ ಹಾಗೆ, ಮಿತ್ರನಿಗೂ, ವರುಣನಿಗೂ, ಅಗ್ನಿಗೂ, ನೇತ್ರಪ್ರಾಯವಾಗಿ ಯಾವ ಸೂರ್ಯ ಮಂಡಲವಿದೆಯೋ ಅದು ಉದಿಯಿಸಿ ಸ್ವರ್ಗಲೋಕ ಭೂಲೋಕಗಳಲ್ಲಿ ವ್ಯಾಪಿಸಿದ್ದು ಆ ಮಂಡಲ ಸ್ವರೂಪನಾದ ಸೂರ್ಯನು ಜಂಗಮಕ್ಕೂ (ಚಲಿಸುವಂತಹ) ಸ್ಥಾವರಕ್ಕೂ (ಸ್ಥಿರವಾದವು ಗಳಿಗೂ) ಅಂತರ್ಯಾಮಿಯಾಗಿದ್ದಾನೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಏಳನೆಯ ಅನುವಾಕವು ಮುಗಿಯಿತು.

|| ಅಥ ಅಷ್ಟಮ ಅನುವಾಕಃ ||

**ಕ್ವೇದಮಭ್ರಂ**

'ಓ ಪ್ರಭುವೇ ! ಈ ಮೇಘ ಅನೇಕ ಕಾಲಾವಯವ, ವಿಶಿಷ್ಟವಾದ ಸಂವತ್ಸರ, ಹಗಲು, ರಾತ್ರಿ ಹಾಗೂ ಮಾಸಗಳು, ಋತುಗಳು ಯಾವುದರ ಆಧಾರದಿಂದ ಇದೆ. ಇವೆಲ್ಲವುಗಳಿಗೆ ಕಾರಣವಾದುದು ಯಾವುದು' ಎಂದು ಪ್ರಶ್ನಿಸಲಾಯಿತು.

**ಅರ್ಧಮಾಸಾ**

'ಪಕ್ಷಗಳು, ಎರಡು ಘಳಿಗೆಯ ಕಾಲವಾದ ಮುಹೂರ್ತಗಳು ಎಲ್ಲಿದ್ದವು ಮತ್ತು ಗ್ರೀಷ್ಮದ ಬೇಸಿಗೆಯಲ್ಲಿ ಜಲಗಳು ಎಲ್ಲಿಗೆ ಹೋಗುತ್ತವೆ. ಆಗ ಅವು ಎಲ್ಲಿರುತ್ತವೆ' ಎಂದು ಪ್ರಶ್ನಿಸಲಾಯಿತು.

**ಕಾಲಾ**

ಈ ಮೊದಲು ಸೃಷ್ಟಿಯು ಜಲಮಯವಾಗಿತ್ತೆಂಬ ಶೃತಿಯ (ಪ್ರಮಾಣ) ಆಧಾರದ ಮೇಲೆ ಸಂವತ್ಸರದಿಂದ ಮುಹೂರ್ತದವರೆಗಿನ ಕಾಲವು ಜಲದಲ್ಲಿದ್ದವು, ಗ್ರೀಷ್ಮದ ಸೂರ್ಯನ ಕಿರಣದ ಬೇಗೆಯಿಂದ ಶೋಷಿಸಲ್ಪಟ್ಟು ಜಲವು ಆ ಕಿರಣಗಳಲ್ಲಿದ್ದಿತು. ಹಾಗೆ ಸೂರ್ಯ ಕಿರಣಗಳಲ್ಲಿದ್ದ ಜಲವನ್ನು ಮೇಘವು ಪಡೆಯುತ್ತಿತ್ತು. ಮೇಘಗಳಿಂದ ವಿದ್ಯುತ್ಕಾಂತಿಗೆ (ಸೂರ್ಯಕಾಂತಿಗೆ) ಸಂಬಂಧಿಸಿತು.

**ಅನವರ್ಣೇ**

'ರೋದಸಿ' ಎಂಬ ಶಬ್ದದಿಂದ ಕರೆಯಲ್ಪಡುವ ಈ ಭೂಮ್ಯಾಕಾಶಗಳು ಅನೇಕ ರೂಪದಲ್ಲಿರುವ ದೇವತೆಗಳಿಂದ ಪರಿಪೂರ್ಣವಾಗಿ ಶೋಭಿಸುತ್ತಿವೆ.

**ಕಿಗ್‌ಸ್ವಿದ**

'ಯಾರಿಂದ ಈ ಭೂಮ್ಯಂತರಿಕ್ಷಗಳು ಧರಿಸಲ್ಪಟಿವೆ ? ಈ ಎರಡರ ಮಧ್ಯೆ ಏನಿದೆ?' ಎಂದು ಕೇಳಿರುವುದಕ್ಕೆ 'ಈ ಭೂಮ್ಯಂತರಿಕ್ಷಗಳು ವ್ಯಾಪಕಶೀಲನಾದ ವಿಷ್ಣುವಿನಿಂದ ಧರಿಸಲ್ಪಟ್ಟಿವೆ.' ಹೀಗೆಂದು ವತ್ಸ ಮಹಾಮುನಿಯು ಅನುಭವಪೂರ್ವಕ ಹೇಳಿದನು.

**ಇರಾವತೀ**

ಈ ಭೂಮ್ಯಾಕಾಶಗಳು ಅನ್ನಾಹಾರಾದಿಗಳಿಂದ ಪಶುಗಳಿಂದ ಹಾಗೂ ಯೋಗ್ಯ ವಾದ ಭಕ್ಷ್ಯಭೋಜ್ಯಗಳಿಂದ ಕೂಡಿ ಮನುಷ್ಯನಿಗೆ (ಅಂದರೆ ಜೀವರಾಶಿಗೆ) ಅನ್ನವನ್ನೊದಗಿಸುವುದಾಗಿವೆ (ಕೊಡುವುದಾಗಿವೆ) ಅಂತಹ ಭೂಮ್ಯಾಕಾಶಗಳನ್ನು ವಿಷ್ಣುವು ಧರಿಸಿರುತ್ತಾನೆ. 'ಓ ಮಹಾವಿಷ್ಣುವೇ, ನೀನು ಸ್ವರ್ಗಸಹಿತವಾದ ಈ ಭೂಮಿಯನ್ನು ಭದ್ರವಾಗಿ ಹಿಡಿದಿದ್ದಿಯೆ.' (ಜೀವರಾಶಿಗಳಲ್ಲಿ ಮನುಷ್ಯ ಜನ್ಮ ಅತ್ಯಂತ ಶ್ರೇಷ್ಠವಾದುದು. ಮನುಷ್ಯನ ಅನುಕೂಲಕ್ಕೆಂದು ಮಾಡಿದ ಅನ್ನಾಹಾರಾದಿಗಳು ಕೊಡುಗೆಯನ್ನು ಸಕಲ ಜೀವರಾಶಿಗಳಿಗೂ ಆಯಾ ರೂಪಕ್ಕೆ ತಕ್ಕಂತೆ ಆಹಾರವನ್ನು ಆ ಮಹಾವಿಷ್ಣುವು ಒದಗಿಸುತ್ತಾನೆಂದು ಹೇಳಬಹುದು.)

**ಕಿಂ ತದ್ವಿಷ್ಣೋ**

'ಆ ಮಹಾವಿಷ್ಣುವು ತಾನೊಬ್ಬನೇ ಪ್ರಕಾಶಪೂರ್ಣವಾದ ಈ ಭೂಮ್ಯಂತರಿಕ್ಷ ಗಳನ್ನು ಧರಿಸಿರಲು ಆ ಬಲವು ಅವನಿಗೆ ಎಲ್ಲಿಯದು ? ಆ ಕಾಂತಿಯೆಲ್ಲಿಯದು' ಎಂದು ಪ್ರಶ್ನಿಸಲಾಯಿತು.

**ವಾತಾದ್ವಿಷ್ಣೋಃ**

ಬಲ್ಲವರು 'ವಾಯುವಿನಿಂದ ವಿಷ್ಣುವಿಗೆ ಬಲವು ಬಂದಿತೆಂದೂ ನಾಶರಹಿತವಾದ ಪರಬ್ರಹ್ಮನಿಂದ ಕಾಂತಿಯು ಬಂದಿತೆಂದೂ ನಾಲ್ಕು ಅಂಶ (ಪಾದ)ಗಳಲ್ಲಿ ಕೇವಲ ಒಂದಂಶವಾದ ಈ ಪ್ರಪಂಚ ರೂಪುಗೊಂಡು ಉಳಿದ ಮೂರು ಅಂಶಗಳು ಈ ಪ್ರಪಂಚದೊಡನೆ ಸಂಬಂಧವಿಲ್ಲದೆ ಆನಂದಪೂರ್ಣ ಚೈತನ್ಯಗಳಾಗಿವೆ. ಆದ್ದರಿಂದ ಅಂತಹ ಪ್ರಾಪಂಚಿಕ ಸಂಬಂಧ ರಹಿತವಾದ ಮೂರು ಅಂಶಗಳಿಂದ ಕೂಡಿದ ಸಾಮರ್ಥ್ಯ ಉಳ್ಳವನಾಗಿ ವಿಷ್ಣುವು ಈ ಭೂಮ್ಯಾಕಾಶಗಳನ್ನು ಧರಿಸಿರುತ್ತಾನೆ. ಈ ಮೂರು ಅಂಶಗಳ ಶ್ರೇಷ್ಠ ಸ್ವರೂಪವೇ ಮಹಾವಿಷ್ಣು ಸ್ವರೂಪ'ವೆಂದು ತಿಳಿಸಿದರು.

**ಅಗ್ನಯೋಃ**

ಅಗ್ನಿ, ವಾಯು ಮೊದಲಾದ ಸಮಸ್ತ ಭೂತಗಳೂ ವಿಷ್ಣುವಿಗೆ ಸಹಕಾರಿಗಳಾಗಿವೆ.

**ಪೃಚ್ಛಾಮಿತ್ವಾ**

ಪರ ಅವಮ, ಮಧ್ಯಮ ಮತ್ತು ಚತು ಎಂಬ ಮೃತ್ಯುವಿನ ಸ್ವರೂಪ ವೆಂತಹುದು? ಪುಣ್ಯಾತ್ಮರ ಹಾಗೂ ಪಾಪಾತ್ಮರ ಸ್ವರೂಪವೆಂತಹುದೆಂದು ಈಗ ತಿಳಿಸಬೇಕೆಂದು ಬಲ್ಲವರಲ್ಲದ ಮುನಿಗಳು ಬಲ್ಲವರಾದ ಮುನಿಗಳನ್ನು ಪ್ರಶ್ನಿಸುತ್ತಿದ್ದಾರೆ.

**ಅಮುಮಾಹು**

ಅಹೋ ರಾತ್ರಿಗಳಿಂದ ಎಲ್ಲ ಪ್ರಾಣಿಗಳ ಆಯಸ್ಸನ್ನು ಕ್ಷಯಿಸುತ್ತ ಬರುವ ಕಣ್ಣಿಗೆ ಕಾಣುವ ಸೂರ್ಯನೇ ಪರಮನೆಂಬ ಮೃತ್ಯುವು ! ಜೀವರಾಶಿಗಳಲ್ಲಿ ಸಂಚರಿಸುತ್ತಿರುವ ವಾಯುವು ಕ್ಷೀಣಿಸುತ್ತಾ ಅಂತ್ಯವನ್ನು ತರುವ ಮಧ್ಯಮನೆಂಬ ಮೃತ್ಯುವು. ಆಹಾರವನ್ನು ಜೀರ್ಣಿಸುವ ಸಲುವಾಗಿ ಇರುವ ಜಠಾರಾಗ್ನಿಯು ಮಂದವಾಗಿ ಪೋಷಣೆ ದೊರೆಯದೆ ಕೊನೆಗೊಳ್ಳುವುದರಿಂದ ಅವಮನೆಂಬ ಮೃತ್ಯುವೆಂದು (ಜಠರಾಗ್ನಿ) ಅಗ್ನಿಯನ್ನು ಹೆಸರಿಸಲಾಯಿತು. ಜೀವನಾಧಾರವಾದ ಓಷಧಿಗಳ ಸಮೃದ್ಧಿಗೆ ಕಾರಣನಾದ ಚಂದ್ರನು ಜೀವಿಗಳಿಗೆ ಒದಗಿಸದೇ ಒಂದು ಕಾಲದಲ್ಲಿ ನಶಿಸಿ ಹೋಗುವಂತೆ ಮಾಡುವನಾದ್ದರಿಂದ ಅವನನ್ನು ಚತು ಎಂಬ ಹೆಸರಿನ ಮೃತ್ಯುವೆಂದು ಕರೆಯಲಾಯಿತು.

**ಅನಾಭೋಗಾ**

ಪಾಪ ಕರ್ಮಗಳು ಶ್ರುತಿ ಸ್ಮೃತಿ ವಿಹಿತ ವಿಶಿಷ್ಟಾಚಾರಗಳನ್ನು ಅತಿಕ್ರಮಿಸಿ ಆತ್ಮಸಂಬಂಧವಾದ ಉತ್ತಮ ವಿಚಾರಗಳಿಂದ ದೂರವಾಗಿರುವವರು, ಹಗಲೂ ರಾತ್ರಿಗಳು ಕಳೆದ ಹಾಗೆ ಅವುಗಳಿಗೆ ಕಾರಣವಾದ ಸೂರ್ಯನಿಗೆ ಸಂಬಂಧಿಸಿದ 'ಪರ'

ಎಂಬ ಮೃತ್ಯುವಿಗೆ ಒಳಗಾಗುತ್ತಾರೆ. ಶೃತಿ ಸ್ಮೃತಿ ವಿಹಿತ ವಿಶಿಷ್ಟಾಚಾರಗಳನ್ನು ಪಾಲಿಸಿಕೊಂಡು ಉನ್ನತ ಉತ್ತಮ ವಿಚಾರ ಸನ್ಮಾರ್ಗಗಳಲ್ಲಿ ನಡೆಯುವವರು ಸ್ವರ್ಗಾದಿ ಪುಣ್ಯಲೋಕ ಭಾಜನರಾಗುತ್ತಾರೆ.

**ತತೋ**

ಪುಣ್ಯಪಾಪಾದಿಗಳ ಮಿಶ್ರ ಕಾರ್ಯಗಳನ್ನೆಸಗಿರುವವರು ಮಧ್ಯಮ ಫಲವನ್ನು ಅಂದರೆ ವಾಯುಸಂಬಂಧವಾದ ಮೃತ್ಯುವಿಗೊಳಗಾಗುತ್ತಾರೆ. ಹಾಗೆಯೇ ಅಗ್ನಿಸಂಬಂಧ ವಾದ ಅಧಮ ಮೃತ್ಯುವನ್ನೂ ಇಂದ್ರ ಸಂಬಂಧವಾದ ಅಧಮಾಧಮ ಮೃತ್ಯುವನ್ನು ಅವರವರ ಕರ್ಮಾನುಸಾರ ಪಡೆಯುತ್ತಾರೆ.

**ಪೃಚ್ಛಾಮಿತ್ವಾ**

ಓ ಬ್ರಾಹ್ಮಣನೇ (ಗುರುವೇ) ಪಾಪಾತ್ಮರು ಮಾಡಿದ ಪಾಪಗಳನ್ನೂ ಅದರ ಫಲವನ್ನೂ ನೀನು ಬಲ್ಲವನಾದ್ದರಿಂದ ಈ ಪಾಪ ಮಾಡಿದವರನ್ನು ಯಮನು ಯಾವ ಲೋಕದಲ್ಲಿ ಯಾವ ರೀತಿಯ ಶಿಕ್ಷೆಗೆ ಒಳಪಡಿಸುತ್ತಾನೋ ಆ ವಿಚಾರವನ್ನು ತಿಳಿಸಬೇಕೆಂದು (ಶಿಷ್ಯರು) ಕೇಳಿದರು.

**ಕಶ್ಯಪಾ**

ಕಶ್ಯಪನೆಂಬ ಸೂರ್ಯನಿಂದ ಹುಟ್ಟಿದ ಆರೋಗ ಮೊದಲಾದ ಸೂರ್ಯರು ಭೂಮ್ಯಾಕಾಶಗಳ ಮಧ್ಯೆ ಪಾಪಿಗಳನ್ನು ಎಲ್ಲ ಕಾಲಗಳಲ್ಲೂ ಹಿಂಸಿಸುತ್ತಿರುತ್ತಾರೆ. ಆ ರೀತಿ ಹಿಂಸಿಸಲ್ಪಡುವ ಪಾಪಾತ್ಮರನ್ನು ಸೂರ್ಯಕಿರಣ ರೂಪದಲ್ಲಿರುವ ದೇವತೆಗಳು ನರಕದಲ್ಲಿರಿಸುತ್ತಾರೆ.

**ತೇ ಶರೀರಾ**

ಪಾಪಕರ್ಮಗಳನ್ನು ಮಾಡಿದವರು ಕೆಲವರು ಕೈ ಇಲ್ಲದವರು. ಕೆಲವರು ಕಾಲಿಲ್ಲ ದವರು, ಕೂದಲಿಲ್ಲದವರು ಹೀಗೆ ಅಂಗಹೀನರಾಗಿ ಅವರವರ ಕರ್ಮಾನುಸಾರ ಮನುಷ್ಯ ಜನ್ಮರಹಿತರಾಗಿ ಸ್ವೇದಜ (ಹೇನು, ಕೂರೆ, ತಗಣೆ) ಉದ್ಭಿಜರಾಗಿ ಹುಟ್ಟುತ್ತಾರೆ.

**ಮೃತ್ವಾ**

ಆ ಪಾಪಾತ್ಮರು ತಾವು ಮಾಡಿದ ಪಾಪ ಕರ್ಮಗಳಿಗನುಗುಣವಾಗಿ ಸಾಯುತ್ತಲೂ ಹುಟ್ಟುತ್ತಲೂ ಅನೇಕ ಜನ್ಮಗಳಲ್ಲಿ (ಹೇನು, ಕೂರೆ, ತಗಣೆ, ಸೊಳ್ಳೆ) ಜಂತುಗಳಾಗಿ ನಮ್ಮನ್ನು ಹೇಗೆ ಹಿಂಸಿಸುತ್ತಾರೋ ಹಾಗೆ ಆ ಪಾಪಾತ್ಮನನ್ನು ದೇವತೆಗಳು ಹಿಂಸಿಸುತ್ತಾರೆ.

**ಅಪ್ಯೈತುಂ**

ಈ ಪ್ರಕಾರವಾಗಿ ಕಶ್ಯಪನ ಮಹಿಮೆಯನ್ನು ಅರಿತವರಾಗಿರುವವರು ಕ್ರಿಮಿ ಕೀಟಾದಿ ಜನ್ಮಗಳನ್ನು ಹೊಂದದೆ ಬಹು ಕಾಲದವರೆಗೆ ಎಲ್ಲಕಲ್ಲೂ ಕೇಳಲ್ಪಡುವವ (ಗೌರವಿಸಲ್ಪಡುವವ)ರಾಗುತ್ತಾರೆ. ಮತ್ತು ಕಶ್ಯಪನನ್ನು ಅತಿಥಿಯ ರೂಪದಲ್ಲಿ ಪೂಜಿಸುತ್ತಾ ಸ್ವೇಚ್ಛೆಯಿಂದ ಕಶ್ಯಪನ ಬಳಿಗೆ ಹೋಗಿ ಹಾಗೂ ಬರುವಷ್ಟು ಸಮರ್ಥ ರಾಗುತ್ತಾರೆ.

**ತಸ್ಯೈಷ**

ಈ ಮುಂದೆ ಹೇಳಲ್ಪಡುವ ವಾಕ್ಯವು ಆ ಮಹಿಮೆಯನ್ನು ಪ್ರತಿಪಾದಿಸುತ್ತದೆ.

**ಆ ಯಸ್ಮಿನ್**

ಸೃಷ್ಟಿಗೆ ಮೊದಲು ಹುಟ್ಟಿದವರಾದ್ದರಿಂದ ಜಗತ್ತಿನ ಕಾರಣಭೂತರಾದ ಆ ಏಳು ಮಂದಿ ಸೂರ್ಯರೂ (ಆರೋಗ ಮೊದಲಾದವರು) ಕಶ್ಯಪನೆಂಬ ಸೂರ್ಯನಿಂದ ಹುಟ್ಟಿ ಅವನಲ್ಲಿ ನೆಲೆಸಿದರೋ, ಅಂತಹ ಕಶ್ಯಪನಿಗೆ ಪ್ರಕಾಶಮಾನನಾದ ದೀರ್ಘಶ್ರುತ್ತಮನೆಂಬ ಮುನಿಯು ಪೂಜನೀಯನಾದನು.

**ಕಶ್ಯಪಃ**

೧ ಆಗತಾನಾಗತಾದಿ ಎಲ್ಲಾ ಸೂಕ್ಷ್ಮ ವಿಷಯಗಳನ್ನು ಅರಿತವನಾದ್ದರಿಂದ ನೋಡುವವನೆಂಬ ಅರ್ಥ ಕೊಟ್ಟು 'ಪಶ್ಯಕ' ನೆಂಬ ಶಬ್ದ ವಾಚ್ಯನಾಗುತ್ತಾನೆ. ಈ ರೀತಿ ಕಶ್ಯಪನ ಮಹಿಮೆ ಎಂತಹುದೆಂದು ತಿಳಿಯುತ್ತದೆ.

**ಅಥಾಗ್ನೇ**

ಈ ರೀತಿ ಕಶ್ಯಪನ ಮಹಿಮೆಯನ್ನು ತಿಳಿಸಿದ ನಂತರ ಅಷ್ಟಮೂರ್ತಿ ಸ್ವರೂಪನಾದ ಅಗ್ನಿಹೋತ್ರನ ಮಹಿಮೆಯನ್ನು ಈ ಮುಂದೆ ಬರುವ ಮಂತ್ರವು ತಿಳಿಸುತ್ತದೆ.

**ಅಗ್ನೇನಯ**

ಹೇ ! ಅಗ್ನಿಹೋತ್ರವೇ । ನೀನು ಸಮಸ್ತ ವಿಷಯಗಳನ್ನು ಬಲ್ಲವನಾದ್ದರಿಂದ ಕುಟಿಲವಾದ ನಮ್ಮ ಪಾಪಗಳನ್ನು ದೂರಮಾಡಿ ನಮಗೆ ಒಳ್ಳೆಯ ಮಾರ್ಗವನ್ನು ತೋರಿಸಿ ನಮಗೆ ಐಶ್ವರ್ಯವು ಲಭಿಸುವಂತೆ ಮಾಡು. ನಿನಗೆ ಅನೇಕ ನಮಸ್ಕಾರಗಳು.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಎಂಟನೆಯ ಅನುವಾಕವು ಮುಗಿಯಿತು.

---

೧ ಬರುವ - ಬಾರದಿರುವ

|| ಅಥ ನವಮ ಅನುವಾಕಃ ||

**ಅಗ್ನಿಶ್ಚ**

ಅಗ್ನಿ ಜಾತವೇದಸ, ಸಹೋಜಸ, ಅಜಿರಸ, ವೈಶ್ವಾನರ, ನರ್ಯಾಪಸ, ಪಂಕ್ತಿರಾಧಸ, ಮತ್ತು ವಿಸರ್ಪಿಣ ಎಂದು ಎಂಟು ಜನ ಅಗ್ನಿಹೋತ್ರರು, ಈ ಎಂಟು ಜನರೂ ಸಮಸ್ತ ಪ್ರಾಣಿಗಳಿಗೂ ಆಧಾರಭೂತರಾಗಿ ತಾವೂ ಸುಖಸ್ಥಿತಿಯನ್ನು ಹೊಂದಿದ್ದಾರೆ. ಈ ರೀತಿ ಅಗ್ನಿಹೋತ್ರಗಳನ್ನು ಹೆಸರಿಸಲಾಗಿದೆ.

**ಯಥರ್ತ್ವೇ**

ನೀಲವರ್ಣದ ಜ್ವಾಲೆ, ಹಳದಿ ವರ್ಣದ ಜ್ವಾಲೆಯೆಂದು ಜ್ವಾಲೆಯ ವರ್ಣ ವಿಶೇಷವನ್ನು ಆಯಾ ಋತುಗಳಿಗನುಸಾರವಾಗಿ, ಒಂದು ಋತುವಿನಲ್ಲಿ ನೀಲಿಯಾಗಿಯೂ ಒಂದು ಋತುವಿನಲ್ಲಿ ಹಳದಿಯಾಗಿಯೂ ಇನ್ನೊಂದರಲ್ಲಿ ಕೆಂಪಗೂ ಮತ್ತೊಂದರಲ್ಲಿ ಬೆಳ್ಳಗೂ ಹೀಗೆ ಆ ಆರು ಋತುಗಳಿಗೆ ಬಣ್ಣಗಳುಂಟಾಗಿದೆ.

**ಅಥ ವಾಯೋಃ**

ಅಗ್ನಿಹೋತ್ರಗಳ ವಿಷಯ ತಿಳಿಸದ ನಂತರ ವಾಯುವಿನ ಹನ್ನೊಂದು ಪುರುಷ ಸ್ವರೂಪ ಮತ್ತು ಹನ್ನೊಂದು ಸ್ತ್ರೀ ಸ್ವರೂಪದ ವಿಚಾರವಾಗಿ ಹೇಳಲಾಗುತ್ತದೆ.

**ಪ್ರಭ್ರಾಜ**

ಪ್ರಭ್ರಾಜಮಾನರು, ವ್ಯವದಾತರು, ವಾಸುಕಿವೈದ್ಯುತರು, ರಜತರು, ಪುರುಷರು, ಶ್ಯಾಮರು, ಕಪಿಲರು, ಅತಿಲೋಹಿತರು, ಊರ್ಧ್ವರು, ಅವಪತಂತರು ಮತ್ತು ವೈದ್ಯುತರು ಎಂಬುದಾಗಿ ಹನ್ನೊಂದು ಜನ ಪುರುಷ ವಾಯುಗಳೂ, ಅದೇ ಹೆಸರಿನ ಸ್ತ್ರೀ ವಾಯು ಗಣಗಳೂ ಇರುವುದಾಗಿ ಹೇಳಿ, ಅವು ಸಾರ್ಥಕವಾಗಿದೆ ಎಂದರು. ವಿಶೇಷವಾಗಿ ಪ್ರಕಾಶಿಸುವವರು, ಬೆಳ್ಳಿಯ ಹಾಗೆ ಬೆಳಗುವವರು, ಕಠಿಣವಾಗಿರುವವರು. ಕಪ್ಪು ವರ್ಣದವರು, ಕಪಿಲ ವರ್ಣದವರು, ಅತಿಯಾದ ಕೆಂಪುಳ್ಳವರು, ಮೇಲು ಲೋಕದವರು, ಅಧೋಲೋಕದವರು, ವಿದ್ಯುತ್ತಿನ ಹಾಗೆ ಪ್ರಕಾಶಿಸುವವರು ಹೀಗೆ ಕ್ರಮವಾಗಿ ಹನ್ನೊಂದು ಹೆಸರುಗಳು.

**ನೈನಂ**

ಯಾರು ಈ ಅಗ್ನಿ ವಿಶೇಷಗಳನ್ನು ವಾಯುಗಣಗಳ ಮತ್ತು ವರ್ಣ ವಿಶೇಷ ಗಳನ್ನು ಅರಿತಿರುತ್ತಾರೋ ಅಂಥವರಿಗೆ ವಿದ್ಯುತ್ ಸಂಬಂಧವಾದ ಅಗ್ನಿಹೋತ್ರವು ಬಾಧಿಸುವುದಿಲ್ಲ.

**ಸಹೋ**

ಪರಾಶರ ಮುನಿಯ ಮಗನಾದ ವ್ಯಾಸ ಮಹರ್ಷಿಗಳು ''ವಿದ್ಯುತ್ಸಂಬಂಧವಾದ ಬಾಧೆಯೇ ಮೃತ್ಯುವೆಂದು ನಾನು ಊಹಿಸಿದೆ'', ಎಂದು ಹೇಳಿದರು.

**ನತ್ವ**

ಈ ರೀತಿ ತಿಳಿದುಕೊಂಡಿರುವವರು ನಿರ್ಭಯವಾಗಿ ವಿಶೇಷ ಜ್ಞಾನವುಳ್ಳವರಾಗಿರುತ್ತಾರೆ. ಅಂತಹವರನ್ನು ಪಿಡುಗು ಸಂಬಂಧವಾದ ಮೃತ್ಯುವು ಹಿಂಸಿಸುವುದಿಲ್ಲ.

**ಅಥಃ**

ವಾಯುಗಣ ಸಂಬಂಧವಾಗಿ ತಿಳಿಸಿದ ನಂತರ ಈಗ ಗಂಧರ್ವ ಗಣಗಳ ಕುರಿತಾಗಿ ಹೇಳಲಾಗುತ್ತದೆ.

**ಸ್ವಾನಭ್ರಾಟ್**

ಸ್ವಾನ್, ಅಭ್ರಾಟ ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು, ವಿಶ್ವಾವಸು, ಮೂರ್ಧನ್ವಾನ್, ಸೂರ್ಯವರ್ಚಾ ಮತ್ತು ಕೃತಿ ಎಂಬುದಾಗಿ ಹನ್ನೊಂದು ಜನ ಗಂಧರ್ವ ಗಣದವರು.

**ದೇವಾಶ್ಚ**

ಗಂಧರ್ವ ಗಣದ ಇವರು ಸ್ವಯಂಪ್ರಕಾಶರು. ಅಧಿಕವಾದ ಕಾಂತಿಯುಳ್ಳವರು. ಬೇರೆಯವರನ್ನು ಪ್ರಕಾಶಿಸಲು ಅನುವು ಮಾಡುವವರು ಮತ್ತು ಅಮೋಘವಾದ ವಾಕ್ಸಂಪತ್ತುಳ್ಳವರು ಆಗಿದ್ದಾರೆ.

**ಗೌರೀ**

ಗೌರವರ್ಣವುಳ್ಳವಳಾಗಿ (ಬಿಳುಪು) ಶಬ್ದಸ್ವರೂಪಳಾದ ಸರಸ್ವತಿ ದೇವಿಯು (ನದಿಯ ರೂಪದಲ್ಲಿ) ನೀರಿನಲ್ಲಿ ಹುಟ್ಟಿದ ಸಮಸ್ತ ಭೂತಜಾಲ (ಜೀವರಾಶಿ)ಗಳನ್ನು ಅನೇಕ ರೂಪದಲ್ಲಿರಿಸಿ ಛಂದೋರೂಪದಲ್ಲಿ ಒಂದು ಪಾದ, ಎರಡು ಪಾದ, ಮೂರು ಪಾದ, ನಾಲ್ಕು ಪಾದ ಎಂಟು ಪಾದ ಮತ್ತು ಒಂಭತ್ತು ಪಾದಗಳುಳ್ಳದ್ದೆಂದು ಅಲ್ಲದೆ ಅನೇಕ ಅಕ್ಷರ ಸ್ವರೂಪವುಳ್ಳದ್ದಾಗಿಯೂ ಇರುವುವೆಂದು ಹೇಳುವ ಕಾರಣ, ಪರಬ್ರಹ್ಮನಲ್ಲಿ ನಿವಾಸ ಮಾಡಿ ಜಗತ್ತಿನ ಎಲ್ಲಾ ಜೀವಿಗಳನ್ನು ಒಂದೊಂದು ನಾಮದಿಂದ ವಿಂಗಡಿಸಿದ್ದಾಳೆಂದು ಹೇಳಲಾಗಿದೆ.

## ವಾಚೋ

ಈ ಮಂತ್ರದಲ್ಲಿ ವಾಗ್ದೇವತೆಯಾದ ಸರಸ್ವತಿಯನ್ನು ಸ್ತೋತ್ರ ಮಾಡಲಾಗಿದೆ.

## ಅಥ

ಸರಸ್ವತಿ ದೇವಿಯನ್ನು ಸ್ತುತಿಸಿದ ನಂತರ ವರಾಹ ರೂಪದ ವಾಯುವನ್ನು ಕುರಿತು ಹೇಳಲಾಗುತ್ತದೆ. ಆ ಮಂತ್ರಗಳನ್ನು ಕ್ರಮವಾಗಿ ತಿಳಿಸಲಾಗುವುದು.

## ವರಾಹ

ವರಾಹ, ಸ್ವತಪಸ, ವಿದ್ಯುನ್ಮಹಸ, ಧೂಪ, ಶ್ವಾಪ, ಗೃಹಮೇಧ, ಈ ಆರು ಮರುದ್ಗಣವಲ್ಲದೆ ಶಿಮಿವಿದ್ವಿಷರೆಂಬ ಹೆಸರಿನ ಹನ್ನೊಂದು ಮರುದ್ಗಣವು ಮೇಲೆ ಹೇಳಿದ ಆರು ಮರುದ್ಗಣಗಳಲ್ಲಿ ಸೇರಿಹೋಗಿದೆ. ಇಲ್ಲಿ ವರಹಾದಿಗಳಿಗೆ ರೂಢಾರ್ಥ ದಂತೆಯೇ ಅನ್ವಯಾರ್ಥ ಸಹ ಇದೆ. ಹೇಗೆಂದರೆ ವೃಷ್ಟಿಯನ್ನುಂಟು ಮಾಡುವ, ತಮಗೆ ತಾವೇ ದಹಿಸುವ, ವಿದ್ಯುತ್ಕಾಂತಿಯಿಂದ ಬೆಳಗುವ, ಸುಗಂಧ ದ್ರವ್ಯ ಗಳಿಲ್ಲದೆಯೆ ಸಮಸ್ತ ಪದಾರ್ಥಗಳಲ್ಲೂ ಪರಿಮಳವನ್ನು ಕೊಡುವ, ಶೀಘ್ರವಾಗಿ ವ್ಯಾಪಿಸುವಂತಹ, ಯಜ್ಞಾದಿಗಳು ನಡೆಯುವಲ್ಲಿ ಇರುವ, ಎಂದು ಮೇಲಿನ ಮರುತ್ತುಗಳಿಗೆ ಕ್ರಮವಾಗಿ ಅನ್ವಯಿಸಬಹುದು. ಕೃಷಿ ಮೊದಲಾದ ಕಾರ್ಯಗಳನ್ನು ಶಿಮಿವಿದ್ವಿಶರಿಗೆ ಅನ್ವಯ ಮಾಡಬಹುದು.

## ಪರ್ಜನ್ಯಾ

ಈ ಹಿಂದೆ ಹೇಳಿದ ಏಳು ಮರುದ್ಗಣಗಳಿಂದ ಪ್ರೇರಿತವಾಗಿ ಮೇಘಗಳು ಭೂಮಿಯ ಮೇಲೆ ಮಳೆ ಸುರಿಸುತ್ತವೆ. ಈ ರೀತಿ ಮಳೆ ಸುರಿಸಿದ ಹಾಗೆಯೇ ಮರುದ್ಗಣಗಳ ಪ್ರೇರಣಾ ವಿಶೇಷದಿಂದ ಮೇಘಗಳು ಮೇಲ್ಮುಖವಾಗಿ ಹೋಗಿ ಎಲ್ಲ ಲೋಕಗಳಲ್ಲೂ ಮಳೆ ಸುರಿಸುತ್ತವೆ. ಈ ಮರುತ್ತಗಳ ಮಹಿಮೆಯನ್ನು ಈ ಮುಂದಿನ ಮಂತ್ರಗಳಲ್ಲಿ ಪ್ರತಿಪಾದಿಸಲಾಗಿದೆ.

## ಸಮಾನ

ಮಳೆಯಿಂದಾದ ಜಲವು ಅಧೋಮುಖವಾಗಿ ಭೂಮಿಯ ಮೇಲೂ ವರ್ಷಿಸಿ ಊರ್ಧ್ವ ಮುಖವಾಗಿ ಮೇಲಿನ ಲೋಕದಲ್ಲಿಯೂ ಕೆಲದಿನಗಳು ಅಗ್ನಿಜ್ವಾಲೆಯ ಹಾಗೆ ಸಮಾನವಾಗಿ ವ್ಯಾಪಿಸಿ ಆಯಾ ಲೋಕಗಳಿಗೆ ಸಂತೋಷ ತರುತ್ತವೆಂದು ಹೇಳಲ್ಪಟ್ಟಿದೆ.

**ಯದಕ್ಷರಂ**

ಸಮಸ್ತ ಭೂತಗಳಿಗೆ ಕಾರಣನಾದ ನಾಶರಹಿತನಾದ ಪರಬ್ರಹ್ಮನನ್ನು ಸಮಸ್ತ ದೇವತೆಗಳೂ ಸೇವಿಸಿ ಅಜ್ಞರಾದ ಮನುಷ್ಯರಿಗೆ ಪರಬ್ರಹ್ಮವನ್ನು ತಿಳಿಯಪಡಿಸಲು ಮುನಿಶ್ರೇಷ್ಠರಾದ ಜಮದಗ್ನಿಯನ್ನು ಉಪದೇಶಕನನ್ನಾಗಿ ನೇಮಿಸಿದರು.

**ಜಮದಗ್ನಿ**

ಜಮದಗ್ನಿ ಮಹಾಮುನಿಯು ನಾಲ್ಕಕ್ಷರಗಳಿಗೂ ಹೆಚ್ಚಿನ ಗಾಯತ್ರಿ ಮೊದಲಾದ ಮಂತ್ರಗಳನ್ನು ಉಪದೇಶಿಸಿ ಸಮಸ್ತ ಪ್ರಾಣಿಗಳೂ ಸಂತೋಷ ಹೊಂದಿ, ಯಾಗಾದಿಗಳನ್ನು ಆಚರಿಸಿ ಸೋಮಪಾನ ಮಾಡಿದವರಂತೆ ವೀರ್ಯವಂತರಾಗಿ ತೇಜಸ್ಸುಳ್ಳವರಾಗಿ ತೃಪ್ತಿಹೊಂದಿದವರಾಗಿ, ಪೂರ್ವವೇ ಮೊದಲಾದ ದಿಕ್ಕುಗಳನ್ನೂ ಆಗ್ನೇಯವೇ ಮೊದಲಾದ ಉಪದಿಕ್ಕುಗಳನ್ನೂ ಸಮಸ್ತ ಪ್ರಾಣಿಗಳಿಗೆ ಕ್ಷೇಮ ವುಂಟಾಗುವಂತೆ ಮಾಡಲೆಂದು ಕೋರಿದರು.

**ತಚ್ಛಂಯೋ**

ವರ್ತಮಾನ ಹಾಗೂ ಭವಿಷ್ಯದಲ್ಲಿ ಉಂಟಾಗುತ್ತಿರುವ ಮತ್ತು ಆಗಲಿರುವ ಕಷ್ಟಗಳ ನಿವಾರಣೆಗಾಗಿ ಯಜ್ಞ, ಯಾಗಾದಿಗಳು ಸಂಭವಿಸುವಂತೆ ಅವುಗಳ ಫಲವು ಯಜಮಾನನಿಗೆ ದೊರಕುವ ಹಾಗೆ ಮಾಡು. ದೇವತೆಗಳು ನಮಗೆ ಎಲ್ಲಾ ಕಾಲಗಳಲ್ಲೂ ಕ್ಷೇಮವನ್ನುಂಟು ಮಾಡಲಿ ; ನಮಗೂ ನಮ್ಮ ಸಂತಾನಗಳಿಗೂ ಕ್ಷೇಮವನ್ನುಂಟು ಮಾಡಲಿ; ಯಾವುದೇ ವಿಧವಾದ ತೊಂದರೆಗಳು ಉಂಟಾಗ ದಿರಲಿ ; ನಮಗೆ ಸಂಬಂಧಿಸಿದ ಎಲ್ಲರಿಗೂ, ದ್ವಿಪದಿಗಳಿಗೂ, ಚತುಷ್ಪದಿಗಳಿಗೂ (ಪಶು ಪಕ್ಷಿಗಳಿಗೂ) ಸದಾ ಕ್ಷೇಮ ಉಂಟಾಗುತ್ತಿರಲಿ. ಹಾಗೆ ನಡೆಸಿಕೊಂಡು ಎಂದು ಅರುಣಕೇತುಕಾಗ್ನಿಯನ್ನು ಪ್ರಾರ್ಥಿಸುತ್ತಿದ್ದೇವೆ.

**ಸೋಮಪಾ**

ಈ ರೀತಿಯಾಗಿ ದೇವತೆಗಳು ಮತ್ತು ದೇವತೆಗಳಲ್ಲದವರ ವಿಚಾರವಾಗಿ ವಿವರಿಸಲಾಗಿದೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಒಂಭತ್ತನೇ ಅನುವಾಕವು ಮುಗಿಯಿತು.

|| ಅಥ ದಶಮ ಅನುವಾಕಃ ||

**ಸಹಸ್ರ**

ಈ ಕಾಣಿಸುತ್ತಿರುವ ಭೂಮಿಯು (ಸಹಸ್ರ ಸಹಸ್ರ) ಅನೇಕಾನೇಕ ಜನಗಳಿಂದ ವ್ಯಾಪಿಸಿದ್ದು ಶ್ರೇಷ್ಠವಾದ ಸ್ವರ್ಗವೂ ಸಹ ಅನೇಕಾನೇಕ ದೇವತೆಗಳಿಂದ ಆವರಿಸಿದ್ದು ಈ ಎರಡೂ ಲೋಕದವರಿಂದ ಪ್ರಾರ್ಥಿಸಲ್ಪಡುತ್ತ ರೋಗಮುಕ್ತರಾದ ಭೋಗ ಭರಿತರಾದ ಸತ್ಯವಂತರಾದ ಸಮಸ್ತ ಜಗತ್ತಿಗೂ ಪೋಷಕರಾಗಿರುವ ಅಶ್ವಿನಿ ದೇವತೆಗಳ ಹಾಗೆಯೇ ಉಪಕಾರಿಯಾಗಿದೆ.

**ಜಾಯಾ**

ಭೂಮಿಯ ಮೇಲೆ ಸಮಸ್ತ ಜೀವರಾಶಿಗಳೂ ಹುಟ್ಟುವ ಕಾರಣ ಭೂಮಿಯು ಪತ್ನಿರೂಪವಾಗಿಯೂ, ಮಳೆ ಸುರಿಸಿ ಸಮಸ್ತ ಸಸ್ಯಗಳೂ ಫಲಿಸುವಂತೆ ಮಾಡುವ ಆಕಾಶವು ಪತಿಯರೂಪವಾಗಿಯೂ ಇದ್ದು ಪರಸ್ಪರ ದಾಂಪತ್ಯ ಭಾವವನ್ನು ಹೊಂದಿವೆ. ಈ ಭೂಮ್ಯಾಕಾಶಗಳಿಗೆ ಬೃಹಸ್ಪತಿ ಹಾಗೂ ಅಗ್ನಿಹೋತ್ರರು (ಶುಕ್ರ) ಗಂಡು ಮಕ್ಕಳಾಗಿಯೂ, ಅಗ್ನಿಹೋತ್ರ ಸಂಬಂಧವಾದ ವೇದಿಕೆಯು ಮಗಳ ರೂಪದಲ್ಲೂ ಇದ್ದುದರಿಂದ ದಾಂಪತ್ಯ ಭಾವದಿಂದಿರುವ ಭೂಮ್ಯಾಕಾಶಗಳಿಗೆ ಸ್ತ್ರೀ ಪುರುಷ ಸಂತಾನ ಗಳುಂಟಾದವು.

**ಶುಕ್ರಂ**

ಭೂಮ್ಯಾಕಾಶಗಳನ್ನು ದಂಪತಿಗಳ ರೂಪದಲ್ಲಿ ಪ್ರಾರ್ಥಿಸಿ ಈಗ ಅಹೋ ರಾತ್ರಿಗಳ ರೂಪದಲ್ಲಿ ಸ್ತೋತ್ರ ಮಾಡುತ್ತಿದ್ದಾರೆ. ಓ! ಭೂಮ್ಯಾಕಾಶಗಳೇ! ನಿಮ್ಮಿಬ್ಬರಲ್ಲಿ ಒಂದು ಹಗಲಿನಂತೆ ಬೆಳ್ಳಗೂ ಮತ್ತೊಂದು ಯಜ್ಞಾದಿಗಳಲ್ಲಿ ಹೊರಹೊಮ್ಮುವ ಧೂಮದ ಹಾಗೆ ಕಪ್ಪಗೂ ರಾತ್ರಿಯ ಹಾಗೆ ಇದೆ. ಈ ರೀತಿಯ ಪರಸ್ಪರ ವಿಲಕ್ಷಣ ಸ್ವರೂಪದ ನೀವಿಬ್ಬರೂ ಆಕಾಶದಲ್ಲಿನ ಸೂರ್ಯನ ಹಾಗೆ ಜೀವರಾಶಿಗಳಿಗೆ ಉಪಕಾರ ಮಾಡುತ್ತಿರುವವರಾಗಿದ್ದೀರಿ. ಸಮಸ್ತ ಪ್ರಾಣಿಗಳಿಗೂ ಆಹಾರವನ್ನು ದೊರಕಿಸುತ್ತಾ ನಿರ್ಮಲ ಬುದ್ಧಿ ಸ್ವಭಾವದವರನ್ನಾಗಿಯೂ ಮಾಡುತ್ತಿದ್ದೀರಿ. ನಾನು ಮಾಡುವ ಕರ್ಮಗಳಲ್ಲಿ ರಾತ್ರಿಯು ಸಮಸ್ತವಾದ ಮಂಗಳ ವನ್ನುಂಟು ಮಾಡಲಿ.

**ವಾಸಾತ್ಯೌ**

ಭೂಮ್ಯಾಕಾಶಗಳಿರಾ ! ನೀವಿಬ್ಬರೂ ಸ್ನೇಹದಿಂದ ಕೂಡಿದ್ದು, ದೇವತೆಗಳಿಗೂ ಮನುಷ್ಯರಿಗೂ ವಾಸಯೋಗ್ಯರಾಗಿ ಅನೇಕ ವಿಧವಾದ ಭೋಗಗಳನ್ನು ಕೊಡುವವರಾಗಿ

ಸಮಸ್ತ ಪ್ರಾಣಿಗಳಿಗೂ ಆಧಾರರಾಗಿ ರಾಸಭ, ಅಶ್ವ ಎಂಬ ಹೆಸರಿನ ಅಶ್ವಿನಿ ದೇವತೆಗಳ ಕುದುರೆಗಳಿಗೆ ಸಮಾನರಾಗಿದ್ದೀರಿ. ಅಂತಹ ನೀವು ನಾನು ಮಾಡುವ ಶುಭ ಕರ್ಮಗಳನ್ನು ಪಾಲಿಸುತ್ತಾ ಕರ್ಮಾಧಿದೇವತೆಯಾದ ಸೂರ್ಯನೊಡನೆ ನಾನು ಮಾಡುವ ಯಜ್ಞಕ್ಕೆ ಬನ್ನಿರಿ.

**ತ್ಯುಗ್ರೋಃಹ**

ಅಶ್ವಿನಿ ದೇವತೆಗಳೇ ! ನೀವು ಮೂರ್ಖನೊಬ್ಬ ಧನವನ್ನು ಸಂಪಾದಿಸಿ ಯಾರಿಗೂ ಕೊಡದೆ ಮೃತನಾದರೂ ಆ ಧನವನ್ನೇ ಆವಾಹಿಸಿಕೊಂಡವನ ಹಾಗೆ ದೃಢವಾಗಿಯೂ ಜಲದ ಮೇಲ್ಭಾಗದಲ್ಲಿ ಆಕಾಶದಲ್ಲಿ ತಿರುಗುತ್ತಿರುವಂತಹ ತೂತಿಲ್ಲದ ಸೋರಲವಕಾಶ ವಿಲ್ಲದಂತಹ ದೋಣಿಯು ತಿರುಗಲು ಯೋಗ್ಯವಾಗಿರುವಂತೆ, ಮೋಡಗಳಲ್ಲಿ ಜಲವನ್ನು ಧರಿಸುತ್ತೀರಿ. ಅಂದರೆ ಅತ್ಯಂತ ಶ್ರದ್ಧೆಯಿಂದ ಮೋಡಗಳನ್ನು ಸಂಗ್ರಹಿಸಿ ಭೂಮಿಯ ಮೇಲೆ ವರ್ಷಿಸಿ ಉಪಕಾರ ಮಾಡುತ್ತಿದ್ದೀರಿ.

**ತಿಸ್ರ**

ಎಂದಿಗೂ ಅಸತ್ಯವನ್ನು ನುಡಿಯದ ಅಶ್ವಿನಿ ದೇವತೆಗಳೇ ! ಅತ್ತಿತ್ತ ವ್ಯಾಪಿಸಿ ಕೊಂಡು ಉತ್ತಮ, ಮಧ್ಯಮ ಮತ್ತು ಅಧಮ ಈ ರೀತಿ ಮೂರು ವಿಧವಾದ ಅಶ್ವಗಳ ಪ್ರವೃತ್ತಿಯ ಹಾಗೆ, ವೇಗವಾಗಿ ಸಂಚರಿಸುವ (ಹಾರುವ) ಪಕ್ಷಿಗಳ ಹಾಗೆ, ತನ್ನ ಮೇಲೆ ಹಾಕಿರುವ ಭಾರವನ್ನು ಸಮಾನವಾಗಿ ಹೊರುವ ರಥದ ಹಾಗೆ, ಸಮಾನ ಜಲಧಾರೆಯುಳ್ಳದ್ದಾಗಿಯೂ, ಆರು ವಿಧ ಪ್ರವೃತ್ತಿಯ ಅಂದರೆ ಮೇಲೆ ತಿಳಿಸಿದ ಉತ್ತಮ, ಮಧ್ಯಮ ಮತ್ತು ಅಧಮ ಇವುಗಳು ಬರುವಿಕೆ ಮತ್ತು ಹೋಗುವಿಕೆ ಎಂಬ ಎರಡು ರೀತಿಯಲ್ಲಿ ಮೂರು ಪ್ರವೃತ್ತಿಗಳಿಂದ ಎಲ್ಲೆಲ್ಲಿ ಎಷ್ಟೆಷ್ಟು ಮಳೆ ಸುರಿಸಬೇಕೋ ಅಷ್ಟಷ್ಟು ಮೋಡಗಳ ಮೂಲಕ ಮೂರು ಹಗಲು ಮೂರು ರಾತ್ರಿಯಾದರೂ ಅನಾಯಾಸವಾಗಿ ಮಳೆ ಸುರಿಸಿ ಜೀವಿಗಳಿಗೆ ಆಧಾರಭೂತರಾಗಿದ್ದೀರಿ.

**ಸವಿತಾರಂ**

ಜಲವನ್ನು ಧರಿಸಿರುವ ಮೇಘಗಳು ಮಳೆಯ ಕಾರಣಕ್ಕಾಗಿಯೇ ಕಿರಣಗಳನ್ನು ವ್ಯಾಪಿಸಿರುವ ಸೂರ್ಯನನ್ನು ಅನುಸರಿಸಿಕೊಂಡು ಶಂಬರ ಎಂಬ ಹೆಸರಿನಿಂದ ಸೂರ್ಯನ ಅನುಗ್ರಹದಿಂದಲೇ ಪ್ರಪಂಚದ ಜೀವರಾಶಿಗಳಿಗೆ ಪ್ರಿಯವಾದ ಮಳೆಯನ್ನು ಸುರಿಸುತ್ತವೆ.

### ತ್ರ್ಯಗ್ಂ

ಅನೇಕ ವಿಧವಾದ ಮನೋಹರವಾದ ಶಬ್ದಗಳಿಂದ ಕೂಡಿದ ಆ ಮೇಘವು ಜಲಸಂಪತ್ತಿನಿಂದ ತೃಪ್ತವಾಗಿದೆ. ಇದನ್ನು ಅರಿತ ಸೂರ್ಯನು ಯಜ್ಞ ಯಾಗಾದಿಗಳನ್ನು ಮಾಡಿ ಸೋಮಪಾನ ಮಾಡಿರುವ ಯಜಮಾನನ ಅಭೀಷ್ಟದಂತೆ ಮಳೆಯನ್ನು ಸುರಿಸುವಂತೆ ಮಾಡುತ್ತಾನೆ.

### ಸಸಂಗ್ರಾಮ

ಕಿರಣಗಳ ಸಮೂಹವನ್ನು ಹೊಂದಿರುವ, ಕತ್ತಲನ್ನು ದೂರ ಮಾಡುವ ಅಶ್ವಗಳಿಂದ ಕೂಡಿದ ಆ ಸೂರ್ಯನು (ನೀರಿಗಾಗಿ) ಶಬ್ದಗೈಯುತ್ತಿರುವ ಗೋವುಗಳೇ ಮೊದಲಾಗಿ ಎಲ್ಲ ಪಶುಪ್ರಾಣಿಗಳಿಗೆ ನೀರನ್ನು ಕುಡಿಸುತ್ತಿದ್ದಾನೆ. ಪ್ರಾಣಿಗಳ ಶಬ್ದದಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಇತರ ದೇವತೆಗಳಿಗೂ ಮಿಗಿಲಾದವನಾಗಿ ರಾಕ್ಷಸರೊಡನೆ ಸೇರದಿರುವ ರಾಕ್ಷಸ ವರ್ಗದವರಿಂದಲೂ ಸ್ತುತಿಸಲ್ಪಡುತ್ತಿದ್ದಾನೆ.

### ಅನ್ವೇತಿ

ಸೂರ್ಯನಿಂದ ಪ್ರೇರೇಪಿಸಲ್ಪಟ್ಟು ಮೇಘವು ಮಳೆ ಸುರಿಸುತ್ತದೆ. ಹೇ ಅಶ್ವಿನಿ ದೇವತೆಗಳೇ ! ಈ ರೀತಿ ಮಳೆ ಸುರಿಸುವಂತೆ ಮಾಡಿ ಆ ಮೂಲಕ ಆಯಾ ಪ್ರಾಣಿಗಳಿಗೆ ಅನುಗುಣವಾಗಿ ಪ್ರತಿ ದಿನವೂ ಬೀಜಾಂಕುರವಾಗುವಂತೆ ಮಾಡಿ ಭೂಮ್ಯಾಕಾಶಗಳಿಗೆ ನೀವು ಉಪಕಾರ ಮಾಡುತ್ತಿದ್ದೀರಿ.

### ತಯೋರೇತೌ

ಆ ಭೂಮ್ಯಾಕಾಶಗಳಿಗೆ ಈ ದಿವಾ ರಾತ್ರಿಗಳು ಮಕ್ಕಳು. ಇಬ್ಬರಿಂದ ಹಗಲು ಭೂಮಿಗೆ ಸಂಬಂಧಿಸಿದ, ರಾತ್ರಿ ಆಕಾಶಕ್ಕೆ ಸಂಬಂಧಿಸಿದ ಸಂತಾನಗಳನ್ನು ಬಿಡುಗಡೆ ಮಾಡುವುದರಿಂದ ಈ ಅಹೋರಾತ್ರಿಗಳು ದಂಪತಿಗಳಿಗೆ ಸಮಾನವಾಗಿವೆಯೆನ್ನಬಹುದು.

### ತಯೋರೇತೌ

ದಂಪತಿಗಳಿಗೆ ಸಮಾನರಾದ ಆ ಅಹೋರಾತ್ರಿಗಳಿಗೆ ಅಗ್ನಿಹೋತ್ರನೂ, ಸೂರ್ಯನೂ ಮಕ್ಕಳು. ಬೆಳ್ಳಗಿರುವ ಸೂರ್ಯನು ರಾತ್ರಿಯ ಮಗ, ಸ್ವಲ್ಪ ಹೆಚ್ಚು ಕೆಂಪಗಿರುವ ಅಗ್ನಿಹೋತ್ರನು ಹಗಲಿನ ಸಂತಾನ. ಈ ಆದಿತ್ಯಾಗ್ನಿಗಳು ಕೂಡ ಜೊತೆಗೂಡಿದ್ದು ದಂಪತಿಗಳ ಹಾಗೆಯೇ ಆಗುತ್ತಾರೆ.

**ತಯೋರೇತೌ**

ಆ ಆದಿತ್ಯಾಗ್ನಿಗಳಿಗೆ ಧೂಮಾತಪಗಳು ಮಕ್ಕಳು. ಅವರಲ್ಲಿ ಧೂಮವು ಅಗ್ನಿಯ ಸಂತಾನ. ತಾಪವೂ ಸೂರ್ಯನ ಸಂತಾನವೆನಿಸಿ ಆ ಇಬ್ಬರೂ ಪರಸ್ಪರ ಸಂಬಂಧ ಹೊಂದಿರುವುದರಿಂದ ಅವರು ದಂಪತಿಗಳಿಗೆ ಸಮಾನರಾಗಿದ್ದಾರೆ.

**ತಯೋರೇತೌ**

ಈ ಧೂಮಾ ತಪರಿಗೆ ಉಷ್ಣ ನೀಹಾರರೆಂಬ ಇಬ್ಬರು ಮಕ್ಕಳು. ಅವರಲ್ಲಿ ಉಷ್ಣ ಅಂದರೆ ಬಿಸುಪು ಧೂಮನ ಸಂತಾನ. ನೀಹಾರ ಎಂದರೆ ಮಂಜು ಆತಪನ ಸಂತಾನ. ಇವರಿಬ್ಬರೂ (ಉಷ್ಣ ನೀಹಾರರು) ತಮ್ಮಿಂದ ಸಂತಾನವನ್ನುಂಟು ಮಾಡದೆ ಧೂಮಾತಪರಲ್ಲೇ ಲೀನರಾದರು. ಆ ರೀತಿ ದ್ಯಾವಾ ಪೃಥ್ವಿಗಳ ಸಂತಾನದ ಪರಂಪರೆಯೆಂದು ಹೇಳಲಾಯಿತು.

**ಸೇಯಗೆಂ**

ರಾತ್ರಿಯ ವೇಳೆ ಸೂರ್ಯ ಹಾಗೂ ಸೂರ್ಯನ ಕಿರಣಗಳು ಕಾಣದಿರುವ ಕಾರಣ ರಾತ್ರಿಯೆಂಬ ಸ್ತ್ರೀ ಗರ್ಭಿಣಿಯಾಗಿ ಸೂರ್ಯರೂಪನಾದ ಪುತ್ರನೊಡನೆ ವಾಸಿಸುತ್ತಾಳೆ. ಯಾವ ಕಾರಣದಿಂದಾಗಿ ರಾತ್ರಿಯಲ್ಲಿ ಸೂರ್ಯನ ಕಿರಣಗಳು ಕಾಣುವುದಿಲ್ಲವೋ ಆ ಕಾರಣದಿಂದಲೇ ಆ ಕಿರಣಗಳು ಗರ್ಭದ ಪಿಂಡವನ್ನಾಶ್ರಯಿಸಿ [೧]ಶುಕ್ಲ [೨]ಶೋಣಿತದ ರೂಪದಲ್ಲಿರುತ್ತವೆ ಯಾವ ರೀತಿ ಗರ್ಭ ಕಟ್ಟಿದ ಗೋವಿನ ಪಿಂಡ ಸಂಬಂಧವಾದ ಶುಕ್ಲ ಶೋಣಿತಗಳಿರುತ್ತವೋ ಹಾಗೆಯೇ ಈ ರಾತ್ರಿಗೂ ಸೂರ್ಯನ ಕಿರಣರೂಪವಾದ ಶುಕ್ಲ ಶೋಣಿತಗಳಿರುತ್ತವೆ.

**ಪ್ರಜಯಿಷ್ಣು**

ಈ ರೀತಿ ರಾತ್ರಿ ಸಂಬಂಧವಾದ ಮಹಿಮೆಯನ್ನು ಯಾರು ತಿಳಿದಿರುವ ರಾಗಿರುತ್ತಾರೋ ಅವರು ಸಂತಾನವುಳ್ಳವರಾಗಿ ಪಶುಸಂಪತ್ತುಳ್ಳವರಾಗಿರುತ್ತಾರೆ. ಆ ರಾತ್ರಿಯ ಸಂತಾನವಾದ ಸೂರ್ಯನ ಮಹಿಮೆಯನ್ನು ಯಾರು ತಿಳಿದವರಾಗಿರು ತ್ತಾರೋ ಅವರು ಸಾಕ್ಷಿ ಸ್ವರೂಪಿಯಾದ ಸೂರ್ಯನಿಗೆ ಸಮಾನರಾಗಿ ಸೂರ್ಯನು ಉದಯಾಸ್ತಗಳನ್ನು ಹೊಂದುವ ಸ್ಥಾನಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುವವ ನಾಗುತ್ತಾರೆ.

---

*೧ ಶುಕ್ಲ = ರೇತಸ್ಸು - ವೀರ್ಯ* *೨ ಶೋಣಿತ - ರಜಸ್ಸು, ಋತುಸ್ರಾವ*

**ಅಥ ಪವಿತ್ರಾಂಗಿರಸ:**

ತರುವಾಯ ಪವಿತ್ರವಾದ ಅಂಗೀರಸರ ಸಂಬಂಧವಾದ ಮಂತ್ರಗಳನ್ನು ಹೇಳಲಾಗುತ್ತದೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹತ್ತನೇ ಅನುವಾಕವು ಮುಗಿಯಿತು.

॥ ಅಥ ಏಕಾದಶ ಅನುವಾಕಃ ॥

**ಪವಿತ್ರವಂತಃ**

ಪವಿತ್ರರಾದ ಋತ್ವಿಕ್ ಯಜಮಾನರುಗಳು ಅನ್ನವನ್ನು ಸೇವಿಸುತ್ತಿದ್ದಾರೆ. ಅಂದರೆ ಅನ್ನ (ಆಹಾರ)ಕ್ಕೆ ಸಂಬಂಧಿಸಿದ ಯಜ್ಞವನ್ನಾಚರಿಸುತ್ತಿದ್ದಾರೆ. ಇವರ ಪಾಲಕನೂ ಪುರಾತನನೂ ಆದ ಬ್ರಹ್ಮನು ಆ ಯಜ್ಞ ಕರ್ಮವನ್ನು ಕಾಪಾಡುತ್ತಿದ್ದಾನೆ. ನಂತರ ಸೃಷ್ಟಿ ಕಾರಣವಾದ ಯಜ್ಞವನ್ನು ಮಾಡುವ ಕಾರಣ ಸಂತೃಪ್ತನಾದ ಜಲಾಧಿಪತಿ ವರುಣನು ಮಳೆ ಸುರಿಸುತ್ತಾನೆ. ಆದ್ದರಿಂದ ಅಂತಹ ಕರ್ಮವನ್ನು ಬುದ್ಧಿವಂತ ರೆನಿಸಿದವರೇ ಮಾಡಲು ಯತ್ನಿಸುತ್ತಾರೆ.

**ಪವಿತ್ರಂತೆ**

ಅನ್ನವನ್ನು ಕೊಡುವ ಹೇ ಸೋಮನೇ ನೀನು ಪವಿತ್ರವಾದ ಪವಿತ್ರದಂದ ಸಂಸ್ಕರಿಸಲ್ಪಟ್ಟು ಸಮರ್ಥವಾಗಿ ಯಜ್ಞಗಳಲ್ಲಿ ಉಪಯೋಗಿಸಲ್ಪಡುತ್ತಿದ್ದೀಯೆ (ಬೇಯಿಸದೆಯೇ ಹಸಿಯಾಗಿರುವ ^(ಅ)ಪುರೋಡಾಶವು ಯಾವ ರೀತಿ ಯಜ್ಞ ಕಾರ್ಯ ಗಳಲ್ಲಿ ಬಳಸಲ್ಪಡುವುದೋ ಹಾಗೆಯೇ ಪವಿತ್ರದಿಂದ ಸಂಸ್ಕರಿಸಲ್ಪಟ್ಟ ಸೋಮವು ಯಜ್ಞ ಕಾರ್ಯಗಳಲ್ಲಿ ಉಪಯೋಗಿಸಲ್ಪಡುವುದು)

**ಬ್ರಹ್ಮಾ**

ಆ ಪರಮಾತ್ಮನು ದೇವತೆಗಳಲ್ಲಿ ಚತುರ್ಮುಖ ಬ್ರಹ್ಮನೂ, ಸಾಹಿತ್ಯ ರಚನಕಾರರು ಗಳಾದ ವಿದ್ವಜ್ಜನ (ಕವಿ)ಗಳಿಗೆ (ಪದವಿ) ವ್ಯಾಕರಣಸಿದ್ಧವಾದ ಪದಗಳೂ, ಚತುಷ್ಪಾದ ಪ್ರಾಣಿಗಳು ಮತ್ತು ಮೃಗಗಳಲ್ಲಿ ಮಹಿಷವೂ (ಕೋಣ) ಪಕ್ಷಿ ಸಂಕುಲದಲ್ಲಿ ಅತ್ಯಂತ ಎತ್ತರಕ್ಕೆ ಹಾರುವ ಶ್ಯೇನ ಪಕ್ಷಿಯೂ (ಹದ್ದು) ವನಗಳನ್ನು ನಾಶಪಡಿಸುವುದರಲ್ಲಿ ಕೊಡಲಿಯೂ, ಯಾಗಗಳಲ್ಲಿ ಮುಖ್ಯವಾಗಿ ಬೇಕಾದ ಸೋಮರಸ ರೂಪನಾಗಿ ಮಂತ್ರಾತ್ಮಕನಾಗಿ ಶುದ್ಧನೂ ಪವಿತ್ರನೂ ಆಗಿರುವ ವಿರಾಟ್ಪುರುಷನೂ ಆಗಿರುವನು.

---

(ಅ) ಅಕ್ಕಿಯ ಹಿಟ್ಟು

**ಅಸತಸದ್ಯೇ**

ಕೆಲವು ಮಹಾನುಭಾವರು ಸೃಷ್ಟಿಕರ್ತರಾಗಲು ತಪಸ್ಸು ಮಾಡಿ ನಂತರ ಮುಂದಿನ ಜನ್ಮದಲ್ಲಿ ಮರೀಚಿ, ವಸಿಷ್ಠ, ಅತ್ರಿ, ಅಗಸ್ತ್ಯರೇ ಮೊದಲಾದ ಮುನೀಶ್ವರರಾಗಿ ಹುಟ್ಟಿ ತಾವು ಪುರ್ನಜನ್ಮದಲ್ಲಿ ಮಾಡಿದ ತಪಸ್ಸಿಗನುಗುಣವಾಗಿ ಅವ್ಯಕ್ತ ಪ್ರಪಂಚವನ್ನು ನಿರ್ಮಿಸಿದರು. ಯಾರು ಅರುಣ ಕೇತುಕಾಗ್ನಿಯನ್ನು ಆರಾಧಿಸುತ್ತಾರೋ ಅವರು ಅತ್ರಿ ಅಗಸ್ತ್ಯರೇ ಮೊದಲಾದವರ ಸಮಾನರಾಗಿ ಸಮಸ್ತ ಜೀವರಾಶಿಗಳಿಗೂ ಸುಖವನ್ನುಂಟು ಮಾಡುತ್ತಾ ಸ್ವರ್ಗದಲ್ಲಿ ನಕ್ಷತ್ರ ರೂಪದಲ್ಲಿ ತೇಜಸ್ವಿಗಳಾಗಿ ಪ್ರಕಾಶಿಸುತ್ತಿದ್ದಾರೆ.

**ಅಥ ಸವಿತು**

ಹೀಗೆ ಅಂಗೀರಸ ಮೊದಲಾದ ಮುನೀಶ್ವರರ ವಿಚಾರವನ್ನು ತಿಳಿಸಿದ ನಂತರ ಮಂತ್ರ ಪ್ರವರ್ತಕನಾದ ವೈರಾಗ್ಯದ ಕೋರಿಕೆಯುಳ್ಳ ಶ್ಯಾವಾಶ್ವನೆಂಬ ಮುನಿಯ ವಿಷಯವನ್ನು ತಿಳಿಸುತ್ತಿದ್ದೇವೆ.

**ಅಮೀಯ**

ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಉನ್ನತವಾದ ಆಕಾಶದಲ್ಲಿ ಪ್ರಕಾಶಿಸುತ್ತಿರುವ ನಕ್ಷತ್ರಗಳು ರಾತ್ರಿಯಲ್ಲಿ ನಮಗೆ ಕಣ್ಣಿಗೆ ಕಾಣಿಸುತ್ತಿದ್ದು ಹಗಲಿನಲ್ಲಿ ಎಲ್ಲಿಯೋ ಹೋಗಿದ್ದಂತೆ ಇರುವುವು. ಏಕೆಂದರೆ ಸೂರ್ಯನ ಪ್ರಕಾಶದಿಂದ ಮುಚ್ಚಿ ಹೋಗಿ ಕಾಣಿಸದಾಗುವುವು. ರಾತ್ರಿಯ ವೇಳೆ ಚಂದ್ರನು ಪ್ರಕಾಶಿಸುತ್ತಿದ್ದರೂ ನಕ್ಷತ್ರಗಳು ಕೂಡ ಪ್ರಕಾಶಿಸುವಂತೆ ಪ್ರಕಾಶಿಸುವುದರಿಂದ ನಕ್ಷತ್ರಗಳೂ ಕಾಣಿಸುತ್ತವೆ.

**ತಥ್ಸವಿತು**

ಯಾವ ಸೂರ್ಯನು ನಮ್ಮ ಬುದ್ಧಿವೃತ್ತಗಳನ್ನು ಪ್ರಚೋದಿಸಿ ಸಮಸ್ತ ವ್ಯಾಪಾರಗಳನ್ನು ನಡೆಯ ಕೊಡುತ್ತಿದ್ದಾನೋ, ಆ ಸಮಸ್ತ ಕಾರ್ಯ ಪ್ರೇರಕನಾದ ಸೂರ್ಯದೇವನ ತೇಜಸ್ಸನ್ನು ಧ್ಯಾನಿಸೋಣ.

**ತಥ್ಸವಿತು**

ಸಮಸ್ತ ಪ್ರಾಣಿಗಳಿಗೂ ಸುಖವನ್ನುಂಟು ಮಾಡುವ, ಪ್ರಶಸ್ತವಾಗಿದ್ದು ಸಮಸ್ತ ಪ್ರಪಂಚವನ್ನು ಧಾರಣ ಮಾಡಿರುವ ಸೂರ್ಯನ ಆ ತೇಜಸ್ಸನ್ನು ಧ್ಯಾನಿಸೋಣ.

**ಆಪಾಗೂಹತ**

ಸೂರ್ಯನು ನಕ್ಷತ್ರಗಳು ಪ್ರಕಾಶಿಸುವಂತೆ ಮಾಡಲು ತನ್ನ ಕಿರಣಗಳನ್ನು

ಸಾಯಂಕಾಲದಲ್ಲಿ ಆಕಾಶದಲ್ಲಿಂದ ಆಕರ್ಷಿಸಿ ತನ್ನಲ್ಲಿ ಸೇರಿಸಿಕೊಳ್ಳುವುದರಿಂದ ರಾತ್ರಿಯ ಬೇಳೆ ನಕ್ಷತ್ರಗಳು ಕಾಣಿಸುತ್ತವೆ. ಮೂಳೆ, ರಕ್ತಮಾಂಸಾದಿಗಳಿಂದ ಕೂಡಿದ್ದರೂ (ಹುಟ್ಟಿದ್ದರೂ) ಹೇಗೆ ಅವುಗಳು ಕಾಣದಂತೆ ಚರ್ಮದಿಂದ ಆವರಣ ಗೊಂಡಿರುವ ಹಾಗೆ ಸೂರ್ಯನ ಕಾಂತಿಯಿಂದ ಆವೃತಗೊಂಡು ಹಗಲಿನಲ್ಲಿ ನಕ್ಷತ್ರಗಳು ಕಾಣಿಸುವುದಿಲ್ಲ.

**ನಾಮನಾಮ್ನೈವ**

ಲೋಕದಲ್ಲಿ ರಾಮ, ಕೃಷ್ಣ, ಗೋವಿಂದ ಹೀಗೆ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವವು ಕೇವಲ ಶಬ್ದಗಳಷ್ಟೆ. ಸ್ತ್ರೀ, ಪುರುಷ, ನಪುಂಸಕ ಎಂದು ಏನು ಕರೆಯಲ್ಪಡುವುದೋ ಅವೆಲ್ಲವೂ ನನ್ನ ಸ್ವರೂಪವೇ. ಸ್ಥಾವರ ಜಂಗಮಾದಿಗಳೆಲ್ಲಾ ನನ್ನ ಸ್ವರೂಪವೇ. ಹಿಂದಿನ ಜನ್ಮದಲ್ಲಿ ಪೂಜಿಸಲ್ಪಟ್ಟವನು ನಾನೇ. ಈ ಜನ್ಮದಲ್ಲಿ ಪೂಜಿಸಲ್ಪಡುತ್ತಿರುವವನೂ ನಾನೇ. ಮುಂದೆ ಪೂಜಿಸಲ್ಪಡುವವನೂ ನಾನೇ. ಈ ರೀತಿ ಅಧ್ಯಾತ್ಮ ಜ್ಞಾನದಿಂದ ಬ್ರಹ್ಮಸ್ವರೂಪಾನುಭವವನ್ನು ವ್ಯಕ್ತಪಡಿಸುತ್ತಿದ್ದಾರೆ.

**ಮಯಾ**

ಪರಮಾತ್ಮ ಸ್ವರೂಪನಾದ ನನ್ನಿಂದಲೇ ಸಮಸ್ತ ಪ್ರಾಣಿಗಳು ಯಜ್ಞವನ್ನು ಮಾಡಿದವು. ಅಂದರೆ ನಾನೇ ಆಯಾ ಶರೀರಗಳಲ್ಲಿದ್ದು ಯಜ್ಞವನ್ನು ಆಚರಿಸಿದೆನು. ನನ್ನಿಂದ ಸೃಷ್ಟಿಸಲ್ಪಟ್ಟ ಭೂಮಿ ಮೊದಲಾದ ಪಂಚಭೂತಗಳೂ ದೇವ ಮನುಷ್ಯ [೧] ತಿರ್ಯಗ್ಯೋನಿ ಜಂತುಗಳಾಗಿ ಏರ್ಪಟ್ಟವು. ಆಯಾಯ ಶರೀರಗಳಲ್ಲಿ ಜೀವರೂಪವಾಗಿ ಪ್ರವೇಶಿಸಿ ಆಯಾ ಶರೀರಾಭಿಮಾನವನ್ನುಂಟು ಮಾಡುತ್ತಿದ್ದೇನೆ. ಈ ರೀತಿಯಾಗಿ ಜೀವಾತ್ಮ ಪರಮಾತ್ಮ ಭೇದವನ್ನು ಹೇಳಲಾಯಿತು.

**ಸ್ತ್ರೀಯಃ**

ಲೋಕದಲ್ಲಿ ಸ್ತ್ರೀಯರು ಆತ್ಮಜ್ಞಾನವನ್ನು ಹೊಂದಿ ಸ್ವಾನುಭವವನ್ನು ಪಡೆದವರಾಗಿರುತ್ತಾರೆ. ಅಂತಹ ಸ್ತ್ರೀಯರು ಸ್ತ್ರೀ ಲಕ್ಷಣಗಳನ್ನು ಹೊಂದಿದ್ದರೂ ಅವರನ್ನು ಸ್ತ್ರೀಯೆಂದು ಕರೆಯದೆ ಪುರುಷರೆಂದು ಕರೆಯಬೇಕೆಂದೇ ಬ್ರಹ್ಮಜ್ಞಾನಿಗಳ ಅಭಿಪ್ರಾಯ. ಪುರುಷ ಲಕ್ಷಣವುಳ್ಳ ಪುರುಷರು ತಮಗಿರಬೇಕಾದ ಆತ್ಮಜ್ಞಾನ ಇಲ್ಲದಿದ್ದು ಸ್ತ್ರೀ ಸಾಮಾನ್ಯರಿಗಿರುವ ಮೋಹಾದಿಗಳಿರುವ ಕಾರಣ ಅಂತಹವರನ್ನು ಪುರುಷರೆಂದು ಕರೆಯದೆ ಸ್ತ್ರೀಯೆಂದೇ ಕರೆಯಬೇಕು. ಆದ್ದರಿಂದ ಇಲ್ಲಿ ಸ್ತ್ರೀ ಪುರುಷ ಭೇದವನ್ನು

---

[೧] *ಅಂಡಜ = ಮೊಟ್ಟೆಯಿಂದ ಹುಟ್ಟಿ ಬರುವ*<br>
*ಸ್ವೇದಜ = ಬೆವರಿನಿಂದ ಹುಟ್ಟಿ ಬರುವ*<br>
*ಉದ್ಭಿಜ = ಭೂಮಿಯಿಂದ ಹುಟ್ಟಿ ಬರುವ*

ಲೋಕ ವ್ಯವಹಾರಕ್ಕೆ ವ್ಯತಿರಿಕ್ತವಾಗಿ ಕರೆಯಲಾಗುವುದು. ಕಣ್ಣುಗಳನ್ನು ಪಡೆದಿದ್ದೂ ಆತ್ಮಾನುಭವವಿಲ್ಲದೆ ಕೇವಲ ಬಾಹ್ಯ ದೃಶ್ಯಗಳನ್ನು ಅವುಗಳ ವರ್ಣವಿಶೇಷವನ್ನು ನೋಡುವವನು ಕಣ್ಣಿದ್ದೂ ಕುರುಡನೇ. ಹೀಗೆಯೇ ವಿದ್ಯೆ ಕಲಿಯದ ತಂದೆಯ ಮಗ ವಿದ್ಯಾವಂತನಾಗಿ ಸಮಸ್ತ ವೇದಶಾಸ್ತ್ರಗಳನ್ನು ತಿಳಿದು ಆತ್ಮಾನುಭವವನ್ನು ಪಡೆದಿದ್ದಲ್ಲಿ ಆ ತಂದೆ ಮಕ್ಕಳಲ್ಲಿ ಮಗನನ್ನು ತಂದೆಯೆಂದೂ ತಂದೆಯನ್ನು ಮಗನೆಂದೂ ಹೇಳಲಾಗುತ್ತದೆ. ಆದ್ದರಿಂದ ಎಲ್ಲ ರೀತಿಯಿಂದಲೂ ತತ್ವಜ್ಞಾನವೇ ಹೆಚ್ಚಿನದೆಂದು ಹೇಳಲಾಗಿದೆ.

**ಅಂಧೋ**

ಬ್ರಹ್ಮಜ್ಞಾನಿಗಳು ಬ್ರಹ್ಮಜ್ಞಾನ ಸಂಬಂಧವಾದ ಮನೋವ್ಯಾಪಾರವು, ಹೊರಗಣ್ಣಿನಿಂದ ಒಂದು ಮಣಿಯನ್ನು ನೋಡಿ ಕೈಯಲ್ಲಿ ತೆಗೆದುಕೊಂಡು ಅದನ್ನು ಧರಿಸಿ ಹೇಗೆ ಆನಂದವನ್ನನುಭವಿಸುತ್ತಾನೋ ಹಾಗೆಯೇ ತನ್ನ ಜ್ಞಾನ ನೇತ್ರದಿಂದ ಪರಮಾತ್ಮನೆಂಬ ಮಣಿಯನ್ನು ನೋಡಿ ಆತ್ಮಾನುಭವದಿಂದ ಕೃತಕೃತ್ಯನಾಗಿ ಆನಂದಿಸುತ್ತಾನೆ. ಆದ್ದರಿಂದ ದೃಷ್ಟಿ ವ್ಯಾಪಾರವನ್ನೂ ತೊರೆದೂ ಸ್ಪರ್ಶ ಜ್ಞಾನದಿಂದ ಗ್ರಹಣ ವ್ಯಾಪಾರವನ್ನು ತೊರೆದೂ ಧಾರಣ ವ್ಯಾಪಾರವನ್ನು, ಜೀವೇಂದ್ರಿಯ ವ್ಯಾಪಾರವನ್ನು ತೊರೆದು ಆತ್ಮಾನುಭವದಿಂದ ಬ್ರಹ್ಮಜ್ಞಾನಾನಂದವನ್ನು ಪ್ರಶಂಸಿಸುವವನಾಗಿರುತ್ತಾನೆ.

**ಊರ್ಧ್ವ**

ಸಂಸಾರವನ್ನು ವೃಕ್ಷಕ್ಕೆ ಹೋಲಿಸಿ ಪ್ರಪಂಚವೆಲ್ಲಕ್ಕೂ ಪರಬ್ರಹ್ಮವೇ ಸರ್ವೋತ್ಕೃಷ್ಟವಾಗಿರುವ ಕಾರಣ ಸಂಸಾರ ವೃಕ್ಷದ ಮೇಲ್ಭಾಗದಲ್ಲಿ ಆ ಪರಬ್ರಹ್ಮನಿದ್ದು ಆಬ್ರಹ್ಮಸ್ತಂಭ ಪರ್ಯಂತವೂ ಇರುವ ಸಕಲ ಪ್ರಾಣಿಗಳೂ ಪರಬ್ರಹ್ಮನಿಗೆ ಹೀನವಾದ ಕಾರಣ ಸಂಸಾರ ವೃಕ್ಷದ ಕೊಂಬೆ ಮೊದಲಾದವು ಕೆಳಗಡೆ ಇವೆ ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ನಾಶಹೊಂದುವ ಸ್ವಭಾವದ ಸಂಸಾರ ವೃಕ್ಷದ ನಿಜಸ್ಥಿತಿಯನ್ನು ಅರಿತಿರುವವನು ನಾನು ಮೃತ ಹೊಂದುತ್ತೇನೆಂದು ಭಯವನ್ನು ಹೊಂದುವುದಿಲ್ಲ. ಏಕೆಂದರೆ ನಾನು ನಾಶರಹಿತವಾದ ಪರಬ್ರಹ್ಮ ಸ್ವರೂಪನೆಂದು ತಿಳಿದವನಾಗಿರುತ್ತೇನಾಗಿ ಶರೀರಕ್ಕೆ ಜನನ ಮರಣಾದಿಗಳು ಇವೆಯಾಗಲಿ ನನಗೆ ಇಲ್ಲವೆಂಬ ವಿಚಾರವುಳ್ಳವನಾಗಿರುತ್ತಾನೆ.

**ಹಸಿತಗ್ಂ**

ನಗು, ಅಳು, ಸಂಗೀತ, ವೀಣಾವಾದನ, ಮೃದಂಗವಾದನ, ಮರಣ, ಜನನ, ಇವೆಲ್ಲವೂ ಶರೀರದಲ್ಲಿರುವ ಶರೀರಸಂಬಂಧವಾದ ಅವಯವಗಳಂತೆಯೇ ಎಂದು ತಿಳಿಯಬೇಕು.

**ಅತ್ಯಶ್ಯಗ್**

ಪರಬ್ರಹ್ಮನಿಗೆ ವಿರುದ್ಧವಾದ ಮಾಯೆಯಿಂದ ದೇಹ ಸಂಬಂಧ ರಹಿತ ಚೈತನ್ಯದ ಪ್ರತಿಬಿಂಬದೊಡನೆ ಸೇರಿದ ಅಹಂಕಾರವು ತಾನು ಜಡವಾದರೂ ಚೇತನವುಳ್ಳದೆಂದು ತೋರುತ್ತಾ '' ಸಂತೋಷಿಸುತ್ತೇನೆ, ದುಃಖಿಸುತ್ತೇನೆ, ಧ್ಯಾನ ಮಾಡುತ್ತೇನೆ, ಆಮೋದ ಪ್ರಮೋದಗಳು ನನಗಾಗಿ ಹುಟ್ಟಿದ್ದುವೆಂದು, ನಾನು ಶರೀರದಲ್ಲಿಯೇ ಸೇರಿದ್ದೇನೆಂದು ವ್ಯವಹರಿಸುತ್ತಾ ತಾದಾತ್ಮ್ಯ ಭ್ರಮೆಯಿಂದ ಶರೀರ ಧರ್ಮಗಳನ್ನು ಆತ್ಮನದೇ'' ಎಂದು ತೋರಿಸುವಂತೆ ಮಾಡುತ್ತದೆ.

**ಸತಂ**

ಆತ್ಮಜ್ಞಾನವಿಲ್ಲದೆ ದೇಹ ತಾದಾತ್ಮ್ಯ ಭ್ರಮೆಯಿಂದ ಕೂಡಿದ್ದ ಮನುಷ್ಯನು ನಿರವಯವ, ನಿರ್ವಿಕಾರವಾದ ತನ್ನ ಸ್ವರೂಪವನ್ನರಿಯದೆ ಈ ಮಣಿಯನ್ನು ನೋಡುತ್ತಿದ್ದೇನೆ. ಕೈಯಲ್ಲಿ ಹಿಡಿದಿದ್ದೇನೆ, ಕಂಠದಲ್ಲಿ ಧರಿಸಿದ್ದೇನೆ, ಬಾಯಿಂದ ಪ್ರಶಂಸಿಸುತ್ತಿದ್ದೇನೆಂದು ಭಾವಿಸಿ ಚಕ್ಷುರಾದಿಂದ್ರಿಯ ರಹಿತನಾದ ತನ್ನಲ್ಲಿ ಚಕ್ಷುರಾದಿಂದ್ರಿಯ ಸಹಿತವಾದ ಶರೀರ ಧರ್ಮಗಳನ್ನು ಆರೋಪಿಸಿಕೊಳ್ಳುತ್ತಾನೆ.

**ನೈತ**

[೧]ಜ್ಞಾನವನ್ನು ದೊರಕಿಸಿ ಕೊಡುವ ಮುನಿಸಮಾನವಾದ ಈ ಮಂತ್ರಗಳ ಆಧಾರವನ್ನು ಅರ್ಥ ಮಾಡಿಕೊಂಡು ಈ ಶರೀರದ ಮೇಲಿನ ವ್ಯಾಮೋಹವನ್ನು ತೊರೆದು ನಿರ್ವ್ಯಾಪಾರನಾಗಬೇಕು. ಅಲ್ಲದಿದ್ದಲ್ಲಿ ಈ ಶರೀರದ ಮೇಲೆ ಅಪೇಕ್ಷೆ ಇರಿಸಿರುವಂತೆ ಶರೀರದಲ್ಲಿನ ಅಗತ್ಯ ಭ್ರಾಂತಿಯಿಂದ ವ್ಯವಹರಿಸಬೇಕೆಂದು ಸಂಭವ ನೆಂಬ ಮುನಿಯ ಅಭಿಪ್ರಾಯ (ಶರೀರದ ಮೇಲೆ ಭ್ರಾಂತಿಯಿಲ್ಲದಿದ್ದರೂ ಇದ್ದಂತೆ ತೋರುವುದು)

**ಆತಮಗ್ನೇ**

ಸಮರ್ಥನಾದ ಅಗ್ನಿಹೋತ್ರವೇ ! ಬಲಶಾಲಿಯು ನಿಮಿಷ ಮಾತ್ರದಲ್ಲಿ ಒಂದು ಯೋಜನ ದೂರ ಹೋಗುವಷ್ಟು ಹಗುರವಾಗಿಯೂ ಒಂದೇ ಚಕ್ರವುಳ್ಳ ಒಂದೇ ಕುದುರೆಯನ್ನು ಕಟ್ಟುವ ವಾಯುವೇಗದಲ್ಲಿ ಹೋಗುವ ರಥವನ್ನು ಹತ್ತಿ ನಾನು ಮಾಡಲಿರುವ ಯಜ್ಞ ಕರ್ಮಕ್ಕೆ ಪ್ರಸನ್ನ ಮನದಿಂದ ಬಾ.

---

೧ ಎರಡು ಕೋಣೆಗಳ ನೀಂ ಮಾಡು ಮನದಾಲಯದಿ । ಹೊರ ಕೋಣೆಯಲಿ ಲೋಗರಾಟಗಳನಾಡು ।
ವಿರಮಿಸೊಬ್ಬನೆ ಮೌನದೊಳ ಮನೆಯ ಶಾಂತಿಯಲಿ । ವರಯೋಗ ಸೂತ್ರವಿದು ಮಂಕುತಿಮ್ಮ ॥
(ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗ)

### ನರಿಷ್ಯತಿ

ಬೆಳ್ಳಗೂ ಕೆಂಪಗೂ ಬಲವಾಗಿಯೂ (ಸುಸಜ್ಜಿತವಾದ) ನೇರವಾದ ಕುದುರೆಯನ್ನು ಹೂಡಿ ರಥವನ್ನೇರಿ ಅರುಣಕೇತುಕಾಗ್ನಿಯು ಹೊರಟು ಬರುತ್ತಿದ್ದರೆ ಆ ಕುದುರೆಯ ನೇರ ಗಮನದಿಂದ ರಥದ ಗತಿಗೆ ಸ್ವಲ್ಪವೂ ಭಂಗ ಬಾರದು. ರಥವು ಅತ್ತಿತ್ತ ಜಾರುವುದೂ ಇಲ್ಲ. ರಥದ ಅಕ್ಷವು ಬದಲಾಗುವುದೂ ಇಲ್ಲ.

### ಏಕಯಾಚ

ಓ ವಾಯುವೇ ! ಒಂದಾಗಲೀ ಹತ್ತಾಗಲೀ ಎರಡಾಗಲೀ ಇಪ್ಪತ್ತಾಗಲೀ ಮೂರಾಗಲೀ ಮೂವತ್ತಾಗಲೀ ಹೆಣ್ಣು ಕುದುರೆಗಳನ್ನು ಹೂಡಿ ರಥವೇರಿ ನಾನು ಮಾಡುವ ಯಜ್ಞ ಪ್ರದೇಶಕ್ಕೆ ಬಂದು ಆ ಕುದುರೆಗಳನ್ನು ರಥ ಬಂಧನದಿಂದ ಬಿಡಿಸು.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹನ್ನೊಂದನೇ ಅನುವಾಕವು ಮುಗಿಯಿತು.

॥ ಅಥ ದ್ವಾದಶ ಅನುವಾಕಃ ॥

### ಆತನುಷ್ವ

ಓ ಇಂದ್ರನೇ, ನೀನು ಎಲ್ಲರಿಗೂ ಪರಿಚಿತನೆಂದು ಗ್ರಹಿಸಿ ಯಜ್ಞ ಯಾಗಾದಿಗಳಲ್ಲಿ ಪ್ರತ್ಯಕ್ಷನಾಗಿ 'ಇದೋ ನಾನು ಬಂದಿದ್ದೇನೆ' ಎಂದು ಉಚ್ಚ ಸ್ವರದಲ್ಲಿ ಎಲ್ಲರ ಅಭಿಮುಖವಾಗಿ ಎಲ್ಲರಿಗೂ ಗೊತ್ತಾಗುವಂತೆ ತಿಳಿಸು. ಈ ರೀತಿ ನೀನು ಯಜ್ಞಕ್ಕೆ ಬಂದು ಹವಿರ್ಭಾಗವನ್ನು ಸ್ವೀಕರಿಸಿ ಪುರುಷನು ತನ್ನ ಬೀಜಾಣುವಿನಿಂದ ಸ್ತ್ರೀಯಲ್ಲಿ ಸಂತಾನವುಂಟಾಗಿಸುವಂತೆ ಚಂದ್ರನ ಮುಖಾಂತರ ಶುಭ್ರವಾಗಿ ಪ್ರಕಾಶಿಸುವ ಜಲವನ್ನು ಸೂರ್ಯ ಕಿರಣದೊಡನೆ ಸೇರಿಸಿ ಮಳೆಯುಂಟಾಗುವಂತೆ ಮಾಡು.

### ಇತಸ್ಸಿಕ್ತ

ವರವನ್ನು ಕೊಡುವಂತಹ ಅರುಣಕೇತುಕಾಗ್ನಿಯನ್ನು ನಮ್ಮ ಬಳಿಯಲ್ಲಿರುವ ಹಾಗೆ ಮಾಡು. ಆ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸುತ್ತೇವೆ. ಆ ಹವಿಸ್ಸನ್ನು ಸೂರ್ಯನಿಗೆ ತಲುಪಿಸಿ ನಂತರ ಚಂದ್ರನು ವೃದ್ಧಿ ಹೊಂದುವಂತೆ ಮಾಡು. ಅಗ್ನಿಗೆ ಅರ್ಪಿಸಿದ ಹವಿಸ್ಸು ಸೂರ್ಯನನ್ನು ಸೇರಿ ಜಲವಾಗುತ್ತದೆ. ಆ ಜಲವು ಅಂತರಿಕ್ಷದಲ್ಲಿರುವ ಚಂದ್ರನಿಗೆ ಭೂಮಿಯಲ್ಲಿರುವ ಔಷಧ ಸಸ್ಯಗಳಿಗೆ ಮಳೆಯನ್ನು ಕೊಡುತ್ತದೆ. ಆದ್ದರಿಂದ ಹೇ ಇಂದ್ರನೇ ! ಇವಿಷ್ಟನ್ನೂ ನೀನು ನಡೆಸಿಕೊಡು ಎಂದು ಇಂದ್ರನನ್ನು ಪ್ರಶಂಸಿಸಲಾಗುತ್ತಿದೆ.

**ಅಸಂಖ್ಯಾತಾ**

ಅನೇಕಾನೇಕ ರೂಪಗಳುಳ್ಳ ಅರುಣ ಕೇತುಕಾಗ್ನಿಯು ಎಣಿಕೆಗೆ ಸಿಕ್ಕದಿರುವವನು. ಅವನನ್ನು ಶಾಸ್ತ್ರಗಳನ್ನು ಕೇಳಿ ತಿಳಿಯಬಹುದಾಗಲೀ ನೋಡುವುದು ಸಾಧ್ಯವಿಲ್ಲ. ಈ ರೀತಿ ಅರುಣ ಕೇತುಕಾಗ್ನಿಯ ರೂಪವನ್ನು ತಿಳಿಯಬೇಕು.

**ಆಮಂದ್ರೈ**

ಓ ಇಂದ್ರನೇ ! ಸಂತೋಷವನ್ನುಂಟು ಮಾಡುವ ನವಿಲುಗರಿಯ ವರ್ಣ ವಿಶೇಷವುಳ್ಳ ಕೂದಲಿರುವ ಕುದುರೆಯನ್ನೇರಿ ಯಜ್ಞ ನಡೆಯುವಲ್ಲಿಗೆ ಬಾ. ನೀನು ಬರುವಾಗ್ಗೆ ಯಾವ ಮನುಷ್ಯನೂ ನಿನಗೆ ಅಡ್ಡಿಪಡಿಸುವುದಿಲ್ಲ. ಕುದುರೆಯ ಹಗ್ಗಗಳನ್ನು ಹಿಡಿದಿರುವವರನ್ನು ಕೂಡ ಯಾರೂ ಅಡ್ಡಿಪಡಿಸುವುದಿಲ್ಲ. ನೀನು ಸಮಸ್ತ ಕೋರಿಕೆಗಳನ್ನು ಈಡೇರಿಸುವವನಾಗಿ ನಾವು ಮಾಡುವ ಯಜ್ಞಕ್ಕೆ ಬಂದು ನಮಗೆ ವರವನ್ನು ಕೊಡು.

**ಮಾಮಂದ್ರೈ**

ನವಿಲುಗರಿಯ ವರ್ಣದ ಕುದುರೆಯೇರಿ, ನೀನು ಬರುತ್ತಿದ್ದಂತೆಯೇ ನಾನು ಆ ಕುದುರೆಯನ್ನೇರಿ ನಿನ್ನೊಡನೆ ನಿನ್ನ ಲೋಕಕ್ಕೆ ಬರುತ್ತೇನೆ. ಈ ಮಧ್ಯೆ ನಿನ್ನ ಕುದುರೆಗೆ ಅಡ್ಡಿಪಡಿಸುವವರು, ಕುದುರೆಯನ್ನು ಹಿಡಿಯುವವರನ್ನು, ಅಡ್ಡಿಪಡಿಸುವವರಾರೂ ಬಾರದಿರಲಿ. ಅನಂತರ ನಿನ್ನ ಲೋಕ (ಸ್ವರ್ಗ)ಕ್ಕೆ ಬಂದು ಐಶ್ವರ್ಯ ನಿಕ್ಷೇಪಗಳನ್ನು ಹೊಂದಿದವನಾಗಿ ನಾನು ಸುಖಿಸುತ್ತೇನೆ.

**ಅಣುಭಿಶ್ಚ**

ಸಹಸ್ರನೇತ್ರನಾದ ಓ ಇಂದ್ರನೇ, ಕ್ಷಣಗಳು ಮುಹೂರ್ತ ಮೊದಲಾಗಿರುವುದರಿಂದ ಸೂಕ್ಷ್ಮವೂ, ಸಂವತ್ಸರ, ಯುಗ ಮೊದಲಾದುವುಗಳಾಗಿರುವುದರಿಂದ ಸ್ಥೂಲವೂ, ಪ್ರಕಾಶಪೂರ್ಣನಾಗಿಯೂ, ಪರಸ್ಪರ ಸಂಬಂಧ ಇಲ್ಲದಂತಿರುವುದರಿಂದಲೂ, ಅಶ್ವಸ್ವರೂಪನಾಗಿರುವ ಕಾಲದೊಡನೆ ಇಲ್ಲಿಗೆ ಬಾ. ಕಾಲಸ್ವರೂಪವಿಲ್ಲದೆ ಬರುವಿಕೆಯು ಸಾಧ್ಯವಿಲ್ಲವಾಗಿ ಕಾಲಾಭಿಮಾನ ದೇವತೆಯಾಗಿರುವ ಅಶ್ವದ ಮೇಲೆ ಕುಳಿತು ಅನುಗ್ರಹಿಸಲು ಬಾ.

**ಅಗ್ನಿರ್ವಿ**

ಓ ಇಂದ್ರನೇ ! ಪ್ರಕಾಶಿಸುವ ವಸ್ತ್ರವುಳ್ಳ, ಅಗ್ನಿ, ಅನೇಕ ವಿಧವಾದ ಧೂಳೆಬ್ಬಿಸುವ ವಾಯು, ವಸಂತ ಗ್ರೀಷ್ಮ ಮೊದಲಾದ ಅನೇಕ ವರ್ಣ ವಿಶೇಷದಿಂದ ಕೂಡಿರುವ ಸಂವತ್ಸರ ಈ ಮೂವರೂ ನಿನ್ನನ್ನು ಸೇವಿಸುವ ಅನುಚರರಾಗಿದ್ದಾರೆ.

## ಸುಬ್ರಹ್ಮಣ್ಯ

ವೇದಗಳ ಕುರಿತು ಪ್ರಿಯವಾಗಿರುವವನೇ (೩ ಬಾರಿ) ಅಧಿಕವಾಗಿ ಐಶ್ವರ್ಯ ವುಳ್ಳವನೇ ಹರಿಯೆಂಬ ಹೆಸರಿನ ಶುಕ್ಲಪಕ್ಷ ಕೃಷ್ಣಪಕ್ಷಾಧಿ ದೇವತೆಗಳನ್ನು ಕುದುರೆಯಾಗಿ ಉಳ್ಳವನೇ, ಮೇಧಾತಿಥಿಯೆಂಬ ಮುನಿಯನ್ನು ಮೇಷ (ಕುರಿಯ) ರೂಪದಲ್ಲಿ ಹರಸಿದವನೇ, ವೃಷಣಶ್ಚನೆಂಬ ಮುನಿಯ ಮಗಳಾದ ಮೇನಕೆಯಲ್ಲಿ ಆಸಕ್ತನಾಗಿ ರುವವನೆ, ಯಜ್ಞಾದಿಗಳಲ್ಲಿ ಗೌರಮೃಗ ಸ್ವರೂಪದಲ್ಲಿ (ಬಿಳಿಯ ಜಿಂಕೆ) ಹವಿಸ್ಸನ್ನು ಸ್ವೀಕರಿಸುವವನೇ, (ಗೌತಮ ಪತ್ನಿಯಾದ) ಅಹಲ್ಯೆಯನ್ನು ಕೂಡಿದವನೇ, ಕೌಶಿಕನೆಂಬ ಮುನಿಯ ಬಳಿ ಬ್ರಾಹ್ಮಣ ಸ್ವರೂಪ ಧರಿಸಿದವನೇ ನಾನು ಮಾಡುತ್ತಿರುವ ಯಜ್ಞದೇಶಕ್ಕೆ ಬಾ ಎಂದು ಇಂದ್ರನನ್ನು ಕರೆಯುತ್ತಿದ್ದಾನೆ.

## ಅರುಣಾಶ್ವಾ

ಕೆಂಪು ವರ್ಣದ ಕುದುರೆಗಳುಳ್ಳವರು, ಜಗತ್ಕಾರಣರಾದವರು, ಭೂಮಿಯ ಮೇಲೆ ವಾಸಿಸುವವರು, ದಿಕ್ಕುಗಳನ್ನೇ ವಸ್ತ್ರವಾಗುಳ್ಳವರು, ಅಗ್ನಿ ಜಾತವೇದ ಮೊದಲಾದ ಹೆಸರುಗಳ ಎಂಟು ಜನ ಅಗ್ನಿಹೋತ್ರಿಗಳು ಈ ಯಜ್ಞಕಾರ್ಯಕ್ಕೆ ಬರುವವರಾದರು.

## ತಾಮ್ರಾಶ್ವಾ

ಕೆಂಪು ವರ್ಣದ ಕುದುರೆಗಳುಳ್ಳವರೂ, ಕೆಂಪು ವರ್ಣದ ರಥಗಳುಳ್ಳವರೂ ಕಪ್ಪಗಿರುವವರೂ, ಕೈಯಲ್ಲಿ ದಂಡವನ್ನು ಹಿಡಿದಿರುವವರೂ, ಹವಿಸ್ಸನ್ನು ತಿನ್ನುತ್ತಿರುವ (ಅಗಿಯುತ್ತಿರುವ) ಹಲ್ಲುಗಳುಳ್ಳವರೂ, ಆದ ಓ ಏಕಾದಶ ರುದ್ರರೇ, ಇಲ್ಲಿಂದ ಉತ್ಕೃಷ್ಟವಾದ ಸ್ವರ್ಗಲೋಕ ಹೊಂದಿದಿರಿ. ಈ ಕುರಿತು ಶಾಸ್ತ್ರ ಪ್ರಮಾಣಗಳು ಹೇಳಿವೆ. ಆದ್ದರಿಂದ ನೀವು ನನ್ನೊಡನೆ ಪುಣ್ಯಲೋಕದಲ್ಲಿ ವಾಸಿಸಲು ಕೋರುತ್ತೇನೆ.

## ಬೃಹಸ್ಪತಿ

ಉದಕವನ್ನುಂಟು ಮಾಡುವ ಬೃಹಸ್ಪತಿ ಹಾಗೂ ಸೂರ್ಯರು ಅನೇಕ ವಿಧದ ವರ್ಣಗಳಿಂದ ಕೂಡಿದ ರಥವನ್ನೇರಿ ಮಳೆ ಸುರಿಸುವ ಆಕಾಶ ಮಾರ್ಗದಲ್ಲಿ ನಾನು ಮಾಡುವ ಯಜ್ಞದೇಶಕ್ಕೆ ಬರುತ್ತಾರೆ. ಈ ರೀತಿ ಬೃಹಸ್ಪತಿ ಮತ್ತು ಸೂರ್ಯರ ಸ್ವರೂಪವನ್ನು ಕೇಳಲಾಗಿದೆ.

## ಉಕ್ತೋ

ಕಾಲದ ಅವಯವಗಳಾದ ವಸಂತಾದಿ ಋತುಗಳು ಅಶ್ವಿನಿ ದೇವತೆಗಳ ಆಕಾರ ವಿಶೇಷ ವಸ್ತ್ರ ವಿಶೇಷಗಳನ್ನು ಕುರಿತು ಈ ಹಿಂದೆ ಹೇಳಿದ ಅನುವಾಕಗಳಲ್ಲಿ ತಿಳಿಸಿದೆ.

ವಸಿಷ್ಠನ ವಂಶದ ರೋಹಿಣನೆಂಬ ಋಷಿ ಪುತ್ರನು ಆಕಾಶದಲ್ಲಿಂದ ಒಂ. ವಿಧವಾದ ಧ್ವನಿಯನ್ನು ಕೇಳಿ ಇಲ್ಲಿ ಯಾವೊಬ್ಬ ಮನುಷ್ಯನೂ ಇಲ್ಲದಿರುವಾಗ ಈ ಶಬ್ದವೆಲ್ಲಿಂದ ಕೇಳಿ ಬರುತ್ತಿದೆ. ಯಾರು ಶಬ್ದಗೈಯ್ಯುತ್ತಿದ್ದಾರೆ ಎಂದು ವಿಚಾರ ಮಾಡುತ್ತಿದ್ದಾನೆ.

**ವಾಶ್ರೇ**

ವಾಸನೆಯನ್ನೂ ಗ್ರಹಿಸಿದ ಹಸು ಕರುವನ್ನು ಕುರಿತು ಕೂಗುವ ಹಾಗೆ ಸೂರ್ಯ ಕಾಂತಿಯನ್ನು ಕೆಂಪು ಮೇಘದಲ್ಲಿರುವ ಕಾರಣ ಧ್ವನಿಯನ್ನುಂಟು ಮಾಡುತ್ತಿದೆ ಎಂದು ನಿಶ್ಚಯಿಸಿದನು.

**ಬ್ರಹ್ಮಣ**

ಓ ಇಷ್ಟದೇವತೆಯೇ ! ಲೋಭರಹಿತವಾದ ಗುಣಸ್ವರೂಪವುಳ್ಳ ಬ್ರಹ್ಮನಿಗೆ ಗುಣದಿಂದ ಬೇರೆಯವರಿಗಿಂತ ಹೆಚ್ಚಿನವನಾಗಿ, ಬ್ರಹ್ಮನ ಆಸನವಾಗಿಯೂ ಬ್ರಹ್ಮನ ಆಚ್ಛಾದನವೂ ಆಗಿದ್ದೀಯೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹನ್ನೆರಡನೆಯ ಅನುವಾಕವು ಮುಗಿಯಿತು.

॥ ಅಥ ತ್ರಯೋದಶ ಅನುವಾಕಃ ॥

**ಅಪಕ್ರಾಮತ ಗರ್ಭಿಣ್ಯಃ**

(ಮೃತ್ಯುಸ್ವರೂಪನಾದ ಮಾರ್ತಂಡನೆಂಬ ಸೂರ್ಯನನ್ನು ಕುರಿತ ಈ ಅನುವಾಕದ ಮಂತ್ರಗಳನ್ನು ಕೇಳುವುದರಿಂದ ಗರ್ಭಿಣಿಯರಿಗೆ ಗರ್ಭಸ್ರಾವವಾಗುವುದೆಂಬ ಕಾರಣದಿಂದ ಈ ಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸದೆ ಮನಸ್ಸಿನಲ್ಲೇ ಹೇಳಿಕೊಳ್ಳಬೇಕು)

**ಅಷ್ಟಯೋನಿ**

ಮೂಲ ಪ್ರಕೃತಿ, ಮಹತ್ತು, ಅಹಂಕಾರ, ಶಬ್ದಾದಿ ಪಂಚ ತನ್ಮಾತ್ರಗಳು ಈ ಎಂಟು ಕಾರಣಗಳಿಂದ ಮುಂದೆ ಮಿತ್ರಾ ವರುಣ ಮೊದಲಾದ ಎಂಟು ಜನ ಪುತ್ರರು. ಇಂದ್ರನೇ ಮೊದಲಾಗಿ ಎಂಟು ಜನ ದಿಕ್ಪಾಲಕರುಗಳನ್ನು ಅಧಿಪತಿಗಳನ್ನಾಗಿ ಉಳ್ಳ ಈ ಭೂಮಿಯ ನಿಜಸ್ಥಿತಿಯನ್ನು - ಮಂತ್ರ ಪ್ರವರ್ತಕನಾದ ನಾನು ವಿವೇಕ ಜ್ಞಾನಗಳಿಂದ ತಿಳಿದುಕೊಂಡಿರುವುದರಿಂದ ನನಗೆ ಮರಣವೆಂಬುದಿಲ್ಲ. ಅಕಾಲ ಮೃತ್ಯುವು ನನ್ನನ್ನು ಬಾಧಿಸುವುದಿಲ್ಲ. ಆದ್ದರಿಂದ ಮುಕ್ತಿಯನ್ನು ಹೊಂದಬಲ್ಲೆನು.

**ಅಷ್ಟಯೋನ್ಯ**

ಮೂಲ ಪ್ರಕೃತಿಯೇ ಮೊದಲಾದ ಎಂಟು ಕಾರಣಗಳಿಂದ ಕೂಡಿದ ಮಿತ್ರಾ ವರುಣನೇ ಮೊದಲಾದ ಎಂಟು ಜನ ತನಯರುಳ್ಳವನಾಗಿ ಇಂದ್ರನೇ ಮೊದಲಾದ ಎಂಟು ಜನ ದಿಕ್ಪಾಲಕರನ್ನು ಅಧಿದೇವತೆಗಳನ್ನಾಗಿ ಹೊಂದಿರುವ ಈ ಆಕಾಶವನ್ನು ವಿವೇಕ ದೃಷ್ಟಿಯಿಂದ ಅರಿತಿರುವೆನಾದ್ದರಿಂದ ನನಗೆ ಮೃತ್ಯು ಎಂಬುದಿಲ್ಲ. ಅಕಾಲ ಮರಣ ಸಂಭವಿಸುವುದಿಲ್ಲ. ಆದ್ದರಿಂದ ನಾನು ಮುಕ್ತಿಯನ್ನು ಪಡೆಯಬಲ್ಲನು.

**ಅಷ್ಟಯೋನಿ**

ಈ ಮೇಲಿನ ಮಂತ್ರದ ಅರ್ಥವೇ ಇದಕ್ಕೂ ಅನ್ವಯಿಸುತ್ತದೆ. ಇಲ್ಲಿ ಸ್ವರ್ಗಕ್ಕೆ ಸಂಬಂಧಿಸಿದ್ದೆಂದು ತಿಳಿಯಬೇಕು.

**ಸುತ್ರಾಮಾಣಂ**

ಹೇಗೆ ಮನುಷ್ಯ ನಿರ್ಮಿತವಾದ ಹಡಗು ಸುರಕ್ಷಿತವಾಗಿರುತ್ತದೆಯೋ ಹಾಗೆಯೇ ದೇವನಿರ್ಮಿತವಾದ ಹಡಗು (ಭೂಲೋಕ) ಕೂಡ ಸುರಕ್ಷಿತವಾಗಿರುತ್ತದೆ.

**ಮಹಿಮೂಷು:**

ನಮ್ಮಗಳ ರಕ್ಷಣೆಗೋಸ್ಕರ ಪ್ರಶಂಸನೀಯವಾದ ಕರ್ಮಗಳ ಕರ್ತೃವನ್ನು ಕಾಯುವಂತೆ ಪರಮಾತ್ಮನು ನಮ್ಮನ್ನು ರಕ್ಷಿಸುತ್ತಾನೆ.

**ಅದಿತಿರ್ದ್ಯೌ**

ಸ್ವರ್ಗ, ಆಕಾಶ, ಭೂಮಿ, ತಾಯಿ, ತಂದೆ, ಮಕ್ಕಳು, ಸಮಸ್ತ ದೇವತೆಗಳು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಕಿರಾತರು ಮೊದಲಾದ ಸಂಕರ ಜಾತಿಗಳು ಸಮಸ್ತ ಸೃಷ್ಟಿಯೂ ಅದಿತಿಯೆಂಬ ದೇವತೆಯೆಂದು ಹೇಳಲಾಗಿದೆ.

**ಅಷ್ಟೌ**

ಅದಿತಿಯೆಂಬ ದೇವತೆಗೆ ಎಂಟು ಜನ ಪುತ್ರರು. ಅವರಲ್ಲಿ ಸೂರ್ಯನೆಂಬ ಒಬ್ಬನನ್ನು ಬಿಟ್ಟು ಉಳಿದ ಏಳು ಜನರೊಡಗೂಡಿ ಅದಿತಿಯು ಸ್ವರ್ಗಲೋಕಕ್ಕೆ ತೆರಳಿ ದೇವತೆಗಳ ಬಳಿ ವಾಸಿಸುತ್ತಿದ್ದಳು.

**ಸಪ್ತಭಿ:**

ಮಾರ್ತಾಂಡನನ್ನು ಬಿಟ್ಟುದರ ಕುರಿತು ಏಳು ಜನ ಪುತ್ರರೊಡನೆ ಸ್ವರ್ಗಲೋಕಕ್ಕೆ

---

೧ ಮಳೆಗಾಲ        ೨ ಹುಲ್ಲು, ಪೊದೆ - ಮರಗಿಡಗಳು

ತೆರಳಿದ ಕುರಿತು ಕಾರಣವನ್ನು ಹೇಳಲಾಗುತ್ತದೆ. ಪೂರ್ವಕಾಲದಲ್ಲಿ ಸಂತಾನಕ್ಕೋಸ್ಕರ ಅದಿತಿಯು ಪತಿಯೊಡನೆ ಸೇರಿದಾಗ ಎರಡು ಮೊಟ್ಟೆಗಳು ಉದ್ಭವಿಸಿದವು. ಅವುಗಳಲ್ಲಿ ಒಂದು ಮೃತಪ್ರಾಯನಾಗಿ ಮೃತ್ಯುವಿಗೆ ಪ್ರೀತಿಕರವಾದುದೆಂದು ಪ್ರಜಾವೃದ್ಧಿಗೆ ಅನುಕೂಲಿಸದೆಂದು ತಿಳಿದು ಅದನ್ನು ಬಿಟ್ಟುಬಿಟ್ಟಳು. ಮೃತಪ್ರಾಯವೆಂಬುದು ಹೇಗೆಂದರೆ, ''ಮೃತಂ ಅಂಡಯದೇಮ ಜನ್ಮ ನಾಸಃ ಮಾರ್ತಂಡ್ಯ'' ಯಾರ ಜನನದಿಂದ ಅಂಡವು ಮೃತವಾಯಿತೋ ಅದು (ಅವನು) ಮಾರ್ತಂಡ. ಅವನನ್ನೇ ನಾವು ಸೂರ್ಯನೆಂದು ಕರೆಯುತ್ತಿರುವುದು ಮತ್ತು ಎರಡನೆಯ ಮೊಟ್ಟೆಯಿಂದ ಏಳು ಜನ ಮಕ್ಕಳು ಆಗಿ ಅವುಗಳಿಗೆ ಭಂಗವುಂಟಾಗದಿರಲು ಅವುಗಳು ಪ್ರಜಾವೃದ್ಧಿಕರವೆಂದು ತಿಳಿದು ಆ ಏಳು ಜನ ಪುತ್ರರನ್ನೂ ಕರೆದುಕೊಂಡು ಸ್ವರ್ಗಕ್ಕೆ ಹೋದಳು. ಹೀಗೆ ಅವರುಗಳ ಬಗ್ಗೆ ಕಾರಣವನ್ನು ಕೊಡಲಾಯಿತು.

**ತಾನನು**

ಅವರುಗಳಿಗೆ ಕ್ರಮವಾಗಿ ಹೆಸರುಗಳನ್ನು ಕೊಡಲಾಗಿದೆ.

**ಮಿತ್ರಶ್ಚ**

ಅವರುಗಳು ಕ್ರಮವಾಗಿ ಮಿತ್ರ, ವರುಣ, ಧಾತಾ, ಅರ್ಯಮ, ಅಂಶು, ಭಗ, ಇಂದ್ರ ಮತ್ತು ವಿವಸ್ವಾನ್ ಅಂದರೆ ಮಾರ್ತಾಂಡ ಎಂದು ಎಂಟು ಜನ ಅದಿತಿಯ ಮಕ್ಕಳು.

**ಹಿರಣ್ಯಗರ್ಭಃ**

ಯಾವ ವಿರಾಟ್ಪುರುಷನಿಂದ ಜಗತ್ಸೃಷ್ಟಿಕಾರಕನಾದ ಹಿರಣ್ಯಗರ್ಭ ಪ್ರಜಾಪತಿಯು ಉಂಟಾದನೋ ಯಾರ ಅನುಗ್ರಹದಿಂದ ಸಕಲ ದೇವತೆಗಳಿಗೂ ಒಡೆಯನೆನಿಸದನೋ ಆ ಪರಮಾತ್ಮನೇ ದ್ಯಾವ ಭೂಮಿಗಳೆರಡಕ್ಕೂ ಧಾರಕನಾಗಿರು ವುದರಿಂದ ಅವನಿಗಲ್ಲವೇ ಹವಿಸ್ಸನ್ನು ಅರ್ಪಿಸುವುದು !

**ಹಗ್ಂಸಶ್ಶುಚಿಸತ್**

ಆ ಪರಬ್ರಹ್ಮ ಪರಮಾತ್ಮನು ವಿಶ್ವವ್ಯಾಪಿ ಅವನಿಗೆ ಹಂಸನೆಂದೂ, ಜ್ಯೋತಿರ್ಮಯನಾದ್ದರಿಂದ ಶುಚಿಸದನೆಂದು, ತನ್ನ ಪ್ರಭಾವದಿಂದ ಸಮಸ್ತ ಜೀವಿಗಳ ಪ್ರಾಣನಿಯಮನವನ್ನು ಮಾಡುವುದರಿಂದ ವಸುವೆಂದೂ ಅಂತರಿಕ್ಷದಲ್ಲಿ ವ್ಯಾಪಿಸಿ ಅಲ್ಲಿನ ಎಲ್ಲ ಜೀವರಾಶಿಗಳಿಗೂ ಅಂತರ್ನಿಹಿತನಾಗಿ ಇರುವುದರಿಂದ ಅಂತರಿಕ್ಷಸದ ನೆಂದು, ಗಾರ್ಹಪತ್ಯಾಗ್ನಿ ರೂಪದಲ್ಲಿ ಇರುವುದರಿಂದ ಹೋತೃವೆಂದು, ಸೋಮಯಾಗ

ಗಳಲ್ಲಿ ಪ್ರಧಾನನಾಗಿರುವುದರಿಂದ ವೇದಿಷದನೆಂದು, ಮಧ್ಯಾಹ್ನದ ವೇಳೆಗೆ ಆಹ್ವಾನಿಸಲ್ಪಡದೆ ಆಗಮಿಸಿ ಆತಿಥ್ಯವನ್ನು ಸ್ವೀಕರಿಸಿ ನಿಲ್ಲದೆ ಹೊರಡುವ ಅತಿಥಿ ರೂಪದಲ್ಲಿರುವುದರಿಂದ ಅತಿಥಿಯೆಂದು, ವ್ರತ ಪೂಜೆ ಯಜ್ಞಾದಿಗಳ ಕಲಶಗಳಲ್ಲಿ ದೇವತೆಗಳ ರೂಪದಲ್ಲಿರುವುದರಿಂದ ದುರೋಣನೆಂದು, ಪುಣ್ಯಕ್ಷೇತ್ರಗಳಲ್ಲಿ ಆರಾಧಿಸಲ್ಪಡುವುದರಿಂದ ವರಸದನೆಂದು, ವೈದಿಕ ಕರ್ಮಗಳಲ್ಲಿ ಫಲಸ್ವರೂಪನಾಗಿರುವುದರಿಂದ ಋತಸದನೆಂದು, ಆಕಾಶದಲ್ಲಿ ಗ್ರಹ ಮತ್ತು ನಕ್ಷತ್ರಗಳ ರೂಪದಲ್ಲಿರುವುದರಿಂದ ವ್ಯೋಮಸದನೆಂದು, ಜಲಚರಗಳಲ್ಲಿ ಇರುವುದರಿಂದ ಅಬ್ಜನೆಂದು, ಗೋವುಗಳಿಂದ ದೊರೆಯುವ ಹಾಲು ಮೊಸರು ಬೆಣ್ಣೆ ಮತ್ತು ತುಪ್ಪಗಳ ರೂಪದಲ್ಲಿ ಇರುವುದರಿಂದ ಗೋಜನೆಂದು, ಸತ್ಯವಚನದಿಂದ ಉಂಟಾಗುವು ಕೀರ್ತಿಯ ಸ್ವರೂಪನಾಗಿರುವುದರಿಂದ ಋತಜನೆಂದು, ಗಿರಿ ಪರ್ವತಗಳಲ್ಲಿ ಸಸ್ಯ ಸಂಪತ್ತಿನ ರೂಪದಲ್ಲಿರುವುದರಿಂದ ಅದ್ರಿಜನೆಂದು ಮತ್ತು ಇಡೀ ಬ್ರಹ್ಮಾಂಡಕ್ಕೆ ಆಶ್ರಯನಾಗಿರುವುದರಿಂದ ಬೃಹತ್ ಎಂದು ಕರೆಯಲ್ಪಡುತ್ತಾನೆ. ಅವನೇ ಅರುಣಕೇತು ಪರಮಾತ್ಮ.

### ಬ್ರಹ್ಮಜಜ್ಞಾನಂ

ಮೂರು ಲೋಕಗಳಲ್ಲೂ ವ್ಯಾಪಿಸಿದ್ದು ಶೋಭಿಸುತ್ತಾ ದೇವತೆಗಳೆಲ್ಲರಿಗೂ ಮೊದಲನೆಯವನಾಗಿ ಪೂರ್ವ ದಿಕ್ಕಿನಲ್ಲಿ ಸೂರ್ಯನಾಗಿ ಉದಯಿಸುತ್ತ ಎಲ್ಲ ದಿಕ್ಕುಗಳಲ್ಲು ಮೂರ್ತಾಮೂರ್ತಗಳನ್ನು ಬೆಳಗಿಸುವ ಪರಬ್ರಹ್ಮ ಎನಿಸಿದ್ದಾನೆ.

### ತದಿತ್ವದನ್ನ

ಅರುಣಕೇತು ಪರಮಾತ್ಮನ ರಥಚಕ್ರ ಉರುಳಿದಂತೆ, ಜೀವನಚಕ್ರವು ಅಂದರೆ ಹುಟ್ಟು ಸಾವುಗಳು ಉರುಳುತ್ತಿರುತ್ತವೆ. ಅಪಾದಿಗಳು (ಹಾವು, ಮೀನು ಮುಂತಾದವು) ದ್ವಿಪಾದಿಗಳು (ಎರಡು ಕಾಲುಗಳು ಉಳ್ಳವರು) ಹಾಗೂ ಚತುಷ್ಪಾದಿಗಳು (ನಾಲ್ಕು ಕಾಲಿನ ಪ್ರಾಣಿಗಳು) ಈ ಸಮಸ್ತ ಜೀವರಾಶಿಗಳಿಗೂ ಹುಟ್ಟು ಸಾವಿನ ರೂಪದಲ್ಲಿ ಆ ಪರಮಾತ್ಮನು [೧]ಪುನರಾವರ್ತನೆಯನ್ನು ತರುತ್ತಿರುತ್ತಾನೆ.

### ಗರ್ಭ:ಪ್ರಾಜಾಪತ್ಯ (ಯಥಾಸ್ಥಾನಂ ಗರ್ಭಿಣ್ಯ:)

ಪ್ರಜಾಪತಿ ಸಂಬಂಧವಾದ ಗರ್ಭಕ್ಕಾಗಿ ಸೂರ್ಯನಿಗೆ ಮೇಲೆ ಹೇಳಿದ ಏಳು ಜನರು ಸಹಾಯಕರೆಂದು ತಿಳಿಸಲಾಗಿದೆ. (ಇಲ್ಲಿಂದ ಮುಂದಕ್ಕೆ ಗಟ್ಟಿಯಾಗಿ ಮಂತ್ರಗಳನ್ನು ಉಚ್ಚರಿಸಬೇಕು.)

---

೧ *ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ ಶಯನಂ ......*

*(ಶ್ರೀ ಶಂಕರಭಗವತ್ಪಾದರ ಭಜಗೋವಿಂದ ಸ್ತೋತ್ರ)*

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿಮೂರನೆಯ ಅನುವಾಕವು ಮುಗಿಯಿತು.

॥ ಅಥ ಚತುರ್ದಶ ಅನುವಾಕಃ ॥

**ಯೇಸೌ ತಪಸ್**

ಈ ಉದಯಿಸುವ ಸೂರ್ಯನು ಎಲ್ಲ ಪ್ರಾಣಿಗಳ ಪ್ರಾಣಗಳನ್ನು ತೆಗೆಯುತ್ತಿದ್ದಾನೆ. ಅಂದರೆ ಆಯುರ್ದಾಯವನ್ನು ಕ್ಷೀಣಿಸುತ್ತಿದ್ದಾನೆ. ಹೇಗೆಂದರೆ ದಿನ, ಮಾಸ, ಋತು, ಸಂವತ್ಸರ ಮೊದಲಾದುವು ಸೂರ್ಯನ ಉದಯವಾಗುವುದರಿಂದಾಗುವ ಕಾರಣ ಒಂದೊಂದು ದಿನವು ಕಳೆದಂತೆ ಜೀವಿಗಳ ಆಯುರ್ದಾಯವು ಕಡಿಮೆಯಾಗುತ್ತ ಹೋಗುತ್ತದೆ. ಸೂರ್ಯನು ಆಯಸ್ಸನ್ನು ಕ್ಷೀಣಿಸುವವನಾಗುತ್ತಾನೆ. ಆದ್ದರಿಂದ ದೇಹಧಾರಿಗಳಾದ ಎಲ್ಲ ಪ್ರಾಣಿಗಳೂ, 'ಓ ಸೂರ್ಯನೇ ನಮ್ಮ ಸಂತಾನಗಳ, ಪಶುಗಳ ಆಯಸ್ಸು ಕ್ಷೀಣವಾಗುವಂತೆ ಮಾಡಬೇಡ ಎಂದು ಪ್ರಾರ್ಥಿಸುತ್ತವೆ.

**ಅಸೌಯೋಸ್ತಮೇತಿ**

ಸೂರ್ಯನು ಅಸ್ತಮಿಸುವ ಮೂಲಕ ಎಲ್ಲ ಜೀವಿಗಳ ಆಯಸ್ಸು ಕ್ಷೀಣಿಸುವಂತೆ ಮಾಡುವುದರಿಂದ ಅವನು ಅಸ್ತಮಿಸದಿರಲಿ. ಓ ಸೂರ್ಯನೇ ನಮ್ಮ ಸಂತಾನ ಹಾಗೂ ಪಶುಗಳ ಆಯಸ್ಸು ಕ್ಷೀಣಿಸುವಂತೆ ಮಾಡಬೇಡ.

**ಅಸೌಯ ಆಪೂರ್ಯತಿ**

ಸೂರ್ಯನು ಎಷ್ಟೇ ಆಳವಾದರೂ ತನ್ನ ಕಿರಣಗಳಿಂದ ಅದನ್ನು ತುಂಬಿ ಉದಯಿಸುತ್ತಾನೆ. (ಉಳಿದ ವಾಕ್ಯಗಳಿಗೆ ಈ ಮೇಲೆ ಹೇಳಿದ ಪ್ರಾರ್ಥನೆಯೇ ಅನ್ವಯಿಸುತ್ತದೆ)

**ಅಸೌಯೋಽ ಪಕ್ಷೀಯತಿ**

ಸೂರ್ಯನು ಅಸ್ತಮಿಸುವುದಕ್ಕಾಗಿ ಕಿರಣಶೂನ್ಯನಾಗುತ್ತಾನೆ (ಉಳಿದ ವಾಕ್ಯಗಳ ಅರ್ಥ ಮೇಲೆ ತಿಳಿಸಿದಂತೆ)

**ಅಮೂನಿ ನಕ್ಷತ್ರಾಣಿ**

ಈ ನಕ್ಷತ್ರಗಳೂ ಕೂಡ ಸಮಸ್ತ ಪ್ರಾಣಿಗಳ ಪ್ರಾಣಗಳೊಡನೆ ಹಗಲಿನ ವೇಳೆ ಅಸ್ತಮಿಸುತ್ತವೆ. ರಾತ್ರಿಯ ವೇಳೆ ಕಾಂತಿಯಿಂದ ಕೂಡಿದ್ದು ಪ್ರಾಣಗಳೊಡನೆ ಉದಯಿಸುತ್ತವೆ. ಆದ್ದರಿಂದ ನಕ್ಷತ್ರಗಳೂ ಸಮಸ್ತ ಪ್ರಾಣಿಗಳ ಆಯಸ್ಸನ್ನು ಕ್ಷೀಣಿಸು

ವಂತೆ ಮಾಡುತ್ತವೆ. ಓ ನಕ್ಷತ್ರಗಳೇ ನಮ್ಮ ಸಂತಾನಗಳ ಹಾಗೂ ಪಶುಗಳ ಆಯಸ್ಸು ಕ್ಷೀಣಿಸುವಂತೆ ಮಾಡದಿರಿ.

**ಇಮೇಮಾಸಾ**

ಈ ಮಾಸಗಳು ಅರ್ಧ ಮಾಸಗಳು (ಪಕ್ಷ) (ಉಳಿದ ವಾಕ್ಯಗಳ ಅರ್ಥ ಮೇಲಿನ ಮಂತ್ರದಲ್ಲಿದ್ದಂತೆ)

**ಇಮ ಋತವಃ**

ಈ ಋತುಗಳು (ಉಳಿದ ಅರ್ಥ ಮೇಲಿನ ಮಂತ್ರದಂತೆ)

**ಅಯಗ್ಂ**

ಈ ಸಂವತ್ಸರವು ಕುಗ್ಗುತ್ತಲೂ ವೃದ್ಧಿಸುತ್ತಲೂ ಇರುತ್ತವೆ. (ಕುಗ್ಗುವಿಕೆಗೂ ವೃದ್ಧಿಗೊಳ್ಳುವಿಕೆಗೂ ಈ ಮೇಲೆ ತಿಳಿಸಿದ ರೀತಿಯಲ್ಲಿ ಅರ್ಥ ಮಾಡಬೇಕು.)

**ಇದಮಹಃ**

ಈ ಹಗಲು (ಹಗಲಿನ ಕುರಿತಾಗಿಯೂ ಈ ಹಿಂದೆ ಹೇಳಿದ ಪ್ರಾರ್ಥನೆಯಂತೆಯೇ ಅನ್ವಯಿಸಬೇಕು.)

**ಇಯಗ್ಂ**

ಈ ರಾತ್ರಿ (ರಾತ್ರಿಯ ಕುರಿತಾಗಿ ಈ ಹಿಂದೆ ಹೇಳಿರುವಂತೆ ಅನ್ವಯಿಸಬೇಕು)

**ಓಂ ಭೂರ್ಭುವಸ್ಸುವಃ**

ಓಂಕಾರ ಪ್ರತಿಪಾದ್ಯನಾದ ಪರಮಾತ್ಮನೇ ಸ್ವರ್ಗ, ಮರ್ತ್ಯ ಪಾತಾಳಗಳಿಗೂ ಲೋಕತ್ರಯ ಸ್ವರೂಪನಾಗಿರುವನು. ನಕ್ಷತ್ರ, ಮಾಸ, ಅರ್ಧಮಾಸ, ಋತು, ಸಂವತ್ಸರ, ದಿವಾ ರಾತ್ರಿಗಳೆಂಬ ಏಳು ಜನ ಪುರುಷರೇ ಪ್ರಣವ ಪ್ರತಿಪಾದ್ಯ ಪರಮಾತ್ಮ ಸ್ವರೂಪನಾದ ಸೂರ್ಯನೊಡನೆ ನಿಮಗಿರುವಂತಹ ಸ್ತ್ರೀ, ಪುರುಷ ಸಂಸರ್ಗ ರೂಪವಾದ ದ್ವಂದ್ವಕ್ಕೆ ಅಡ್ಡಿ ತರಬೇಡಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿನಾಲ್ಕನೆಯ ಅನುವಾಕವು ಮುಗಿಯಿತು.

|| ಅಥ ಪಂಚದಶ ಅನುವಾಕಃ ||

**ಅಥಾದಿತ್ಯ**

ಅನಂತರ ಅಷ್ಟಮೂರ್ತಿಗಳ ಸ್ವರೂಪನಾದ ಆದಿತ್ಯನ ಕುರಿತು ಧ್ಯಾನವನ್ನು ಹೇಳಲಾಗುತ್ತದೆ. ಅಂದರೆ ಸೂರ್ಯನಿಗೆ ನಕ್ಷತ್ರ ಮೊದಲಾದ ಏಳು ಜನ ಪುರುಷರ ಸಹಕಾರತ್ವವನ್ನು ಹೇಳಿದ ನಂತರ ವಸು, ರುದ್ರಗಣಗಳೇ ಮೊದಲಾದ ಎಂಟುಗಣಗಳ ಸ್ವರೂಪನಾದ ಸೂರ್ಯನ ಕುರಿತು ಧ್ಯಾನವನ್ನು ಹೇಳಲಾಗುತ್ತದೆ.

**ವಸೂನಾಮಾದಿತ್ಯ .... ಮಿಥುನಗ್ಂ ರೀಢ್ವಮ್**

ಅಷ್ಟವಸುಗಳ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ; ಏಕಾದಶ ರುದ್ರರ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ; ದ್ವಾದಶಾದಿತ್ಯರ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ; ಸತ್ಪುರುಷರಾದ ಮಹರ್ಷಿಗಳ ಸ್ವರೂಪನಾಗಿಯೂ ಸತ್ಯ ಭಾಷ ಸ್ವರೂಪನಾಗಿರುವ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ ; ಎಲ್ಲೆಡೆ ಮಳೆ ಸುರಿಸುವ, ಪ್ರಾಣಿಗಳನ್ನು ರಕ್ಷಿಸುವ, ಶೀಘ್ರವೇಗಿಗಳಾದ ವಾಯುಗಳ ಸ್ವರೂಪ ವಾದ ಸೂರ್ಯನ ಸ್ಥಾನದಲ್ಲಿ ಅವರ ಅನುಗ್ರಹದಿಂದ ದೇವಯಾನಿಗಳಾಗಿ ವಿಶೇಷತೆ ಪಡೆದವರ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ ; ವಿಶ್ವೇ ದೇವತೆಗಳ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹದಿಂದ, ವ್ಯವಹಾರ ಹೇತುಗಳಾದ ಸಂವತ್ಸರ ಸ್ವರೂಪನಾದ ಸೂರ್ಯನ ಸ್ಥಾನದಲ್ಲಿದ್ದು ಅವರ ಅನುಗ್ರಹ ದಿಂದ ತೇಜೋವಂತನಾಗಿ ಪ್ರಕಾಶಿಸುವವನಾದನು.

**ಓಂ ಭೂರ್ಭುವ**

ಪ್ರಣವ ಪ್ರತಿಪಾದಕನಾದ ಪರಮಾತ್ಮನು ಸ್ವರ್ಗ, ಮರ್ತ್ಯ ಪಾತಾಳಾದಿ ಲೋಕತ್ರಯಗಳಲ್ಲಿ ವ್ಯಾಪಿಸಿದ್ದೇನೆ. ಆದ್ದರಿಂದ ಲೋಕತ್ರಯ ಸ್ವರೂಪ ಪ್ರಕಾರ ಪ್ರತಿಪಾದಕ ಪರಮಾತ್ಮನ ಸ್ವರೂಪನಾದ ಸೂರ್ಯನ ಕಿರಣಗಳೇ, ನಿಮಗೂ ಸೂರ್ಯನಿಗೂ ಇರುವಂತ ಅವಿಚ್ಛಿನ್ನ ಸಂಬಂಧವೇ ನಾವು ದಂಪತಿಗಳಲ್ಲುಂಟು ಮಾಡಿರಿ. ನಮಗೆ ಯಾವ ರೀತಿಯ ಅಡ್ಡಿಯನ್ನೂ ತಾರದಿರಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿನೈದನೇ ಅನುವಾಕವು ಮುಗಿಯಿತು.

|| ಅಥ ಷೋಡಶ ಅನುವಾಕಃ ||

**ಆರೋಗ ಸ್ಥಾನೇ .... ಮಿಥುನಗ್ಂ ರೀಢ್ವಮ್**

ಆರೋಗ, ಭ್ರಾಜ, ಪಟರ, ಪತಂಗ, ಸ್ವರ್ಣರ, ಜ್ಯೋತಿಷೀಮತ, ವಿಭಾಸ ಮತ್ತು ಕಶ್ಯಪ ಎಂಬ ಸೂರ್ಯರ ಸನ್ನಿಧಿಯಲ್ಲಿದ್ದು ಅವರುಗಳ ಅನುಗ್ರಹದಿಂದ ಹೊಂದಿದ ಕಾಂತಿಯಿಂದ ಪ್ರಕಾಶಿಸುತ್ತಿದ್ದೇನೆ. ಓ ಉದಕಗಳೇ ! ನಿಮಗೂ ಪ್ರಣವ ಪ್ರತಿಪಾದಕ ನಾದ ಸೂರ್ಯನಿಗೂ ಇರುವ ಸಂಬಂಧದ ರೀತಿಯಲ್ಲೇ ನಾವು ದಂಪತಿಗಳಿಗೆ ಅವಿಚ್ಛಿನ್ನ ಸಂಬಂಧ ಉಂಟಾಗುವಂತೆ ಮಾಡಿರಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿನಾರನೆಯ ಅನುವಾಕವು ಮುಗಿಯಿತು.

|| ಅಥ ಸಪ್ತದಶ ಅನುವಾಕಃ ||

**ಅಥ ವಾಯೋ**

ನಂತರ ಹನ್ನೊಂದು ಪುರುಷ ಸ್ವರೂಪ ಮತ್ತು ಹನ್ನೊಂದು ಸ್ತ್ರೀ ಸ್ವರೂಪಗಳನ್ನುಳ್ಳ ವಾಯುವಿನ ಹೆಸರುಗಳನ್ನೂ ಹೇಳಲಾಗುತ್ತದೆ.

**ಪ್ರಭ್ರಾಜ .... ಮಿಥುನಗಮ್ ರೀಢ್ವಮ್**

ಪ್ರಭ್ರಾಜಮಾನರು, ವ್ಯವದಾತರು, ವಾಸುಕಿವೈದ್ಯುತರು, ರಜತರು, ಪರುಷರು, ಕಪಿಲರು, ಶ್ಯಾಮರು, ಅತಿಲೋಹಿತರು, ಊರ್ಧ್ವರು, ಅವಪತಂತರು, ವೈದ್ಯುತರು, ಎಂಬ ಹೆಸರಿನಿಂದ ಹನ್ನೊಂದು ಪುರುಷ ಸ್ವರೂಪ ಮತ್ತು ಹನ್ನೊಂದು ಸ್ತ್ರೀ ಸ್ವರೂಪವುಳ್ಳ ಏಕಾದಶ ರುದ್ರರ ಸ್ವರೂಪದಲ್ಲಿ ವಾಯುವಿನ ಕುರಿತು ಹೇಳಲಾಗಿದೆ. ಅಂತಹ ವಾಯು ಸ್ವರೂಪದ ರುದ್ರರ ಅನುಗ್ರಹದಿಂದ ಹೊಂದಿದ ಕಾಂತಿಯಿಂದ ಪ್ರಕಾಶಿಸುತ್ತಿದ್ದೇನೆ. ಅಂತಹ ರುದ್ರರಿಗಿಂತ ಅಭಿನ್ನನಾದ ವಾಯು ಪ್ರಣವ ಪ್ರತಿಪಾದಕನಾಗಿ ಲೋಕತ್ರಯ ವ್ಯಾಪಿ ಪರಮಾತ್ಮ ಸ್ವರೂಪವೆಂದು ಹೇಳಲ್ಪಟ್ಟಿದೆ. ಅಂತಹ ವಾಯು ಸಂಬಂಧವಾದ ರೂಪವುಳ್ಳವರೇ, ನಾವು ದಂಪತಿಗಳ ಸಂಬಂಧವೆಂಬ ದ್ವಂದ್ವದಲ್ಲಿ ವಿಯೋಗ ಬಾರದಂತೆ ಮಾಡಿರಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿನೇಳನೆಯ ಅನುವಾಕವು ಮುಗಿಯಿತು.

॥ ಅಥ ಅಷ್ಟಾದಶ ಅನುವಾಕಃ ॥

**ಅಥಾಗ್ನೇ**

ರುದ್ರಾಭಿನ್ನವಾದ ವಾಯುವಿನ ಕುರಿತು ಹೇಳಿದ ನಂತರ ಅಷ್ಟಮೂರ್ತಿಗಳಾದ ಅಗ್ನಿ-ಹೋತ್ರರ ಕುರಿತು ಹೇಳಲಾಗುತ್ತಿದೆ.

**ಅಗ್ನೇಃ ಪೂರ್ವದಿಶ್ಯ ..... ಮಿಥುನಗ್ಂ ರೀಢ್ವಮ್**

ಪೂರ್ವ ದಿಕ್ಕಿನ ಅಗ್ನಿ ಎಂಬ ಹೆಸರಿನ ಅಗ್ನಿಹೋತ್ರವಿನ, ಆಗ್ನೇಯ ದಿಕ್ಕಿನ ಜಾತವೇದಸನೆಂಬ ಹೆಸರಿನ, ದಕ್ಷಿಣ ದಿಕ್ಕಿನ ಸಹೋಜಸನೆಂಬ ಹೆಸರಿನ, ನೈರುತ್ಯ ದಿಕ್ಕಿನ ಅಜಿರಾಪ್ರಭವನೆಂಬ ಹೆಸರಿನ ಉತ್ತರ ದಿಕ್ಕಿನ ಪಂಕ್ತಿರಾಧಸನೆಂಬ ಹೆಸರಿನ ಮತ್ತು ಈಶಾನ್ಯ ದಿಕ್ಕಿನ ವಿಸರ್ಪಿ ಎಂಬ ಹೆಸರಿನ ಅಗ್ನಿಹೋತ್ರಗಳ ಅನುಗ್ರಹದಿಂದಾಗಿ ಪಡೆದ ಕಾಂತಿಯಿಂದ ಪ್ರಕಾಶಿಸುತ್ತಿದ್ದೇನೆ. ಪ್ರಣವ ಪ್ರತಿಪಾದ್ಯನಾದ ಲೋಕತ್ರಯ ಸ್ವರೂಪನಾದ ಪರಮಾತ್ಮನು ಈ ಲೋಕತ್ರಯಗಳಿಂದ ಅಭಿನ್ನನು. ಆದ್ದರಿಂದ ಓ ದಿಕ್ಕುಗಳೇ, ನಿಮಗೆ ಅಗ್ನಿಯೇ ಮೊದಲಾದ ಎಂಟು ಜನ ಅಗ್ನಿಹೋತ್ರರಲ್ಲಿರುವ ಅಭಿನ್ನತೆಯಂತೆಯೇ (ನಾವು ದಂಪತಿಗಳಲ್ಲಿ ಸಂಬಂಧ ಅಭಿನ್ನತೆಯುಂಟಾಗುವಂತೆ ಮಾಡಿ) ನಮ್ಮ ದಾಂಪತ್ಯದಲ್ಲಿ ವಿರಸವುಂಟಾಗದಂತೆ ಮಾಡಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹದಿನೆಂಟನೆಯ ಅನುವಾಕವು ಮುಗಿಯಿತು.

॥ ಅಥ ಏಕೋನವಿಂಶತಿ ಅನುವಾಕಃ ॥

**ದಕ್ಷಿಣ ಪೂರ್ವಸ್ಯಾಂ ದಿಶಿ .... ಶತಕೃತವಿತ್ಯೇತೆ**

ಆಗ್ನೇಯ ದಿಕ್ಕಿನ, ನೈರುತ್ಯ ದಿಕ್ಕಿನ, ವಾಯುವ್ಯ ದಿಕ್ಕಿನ ಮತ್ತು ಈಶಾನ್ಯ ದಿಕ್ಕಿನ ವಿಸರ್ಪಿ ಎಂಬ ನರಕದಿಂದ ನಮ್ಮನ್ನು ರಕ್ಷಿಸು ಎಂದು ಇಷ್ಟದೇವತೆಯನ್ನು ಬೇಡುತ್ತಿದ್ದೇನೆ. ದುಃಖ ಭಾದೆಗಳಿಂದ ಯಾವ ಕಾರಣದಿಂದಾಗಿ ನಾವು ಈ ರೀತಿ ನರಳುತ್ತಿದ್ದೇವೆಯೋ ಎಂದು ಯೋಚಿಸಲೂ ಆಗದಂತಹ ಆ ವಿಸರ್ಪಿ ಎಂಬ ನರಕದಿಂದ ನಮ್ಮನ್ನು ಪಾರು ಮಾಡಿ ಎಂದು ಬೇಡುತ್ತಿದ್ದೇನೆ. ಈ ವಿಚಾರದ ವ್ಯಾಖ್ಯೆ ಆಯಸ್ಮಿನ್ ಸಪ್ತವಾಸವಾಃ, ಇಂದ್ರಿಯಾಣಿ ಶತಕ್ರತ ಎಂಬೆರಡು ಮಂತ್ರಗಳಲ್ಲೂ ಹಾಗೂ ಇಂದ್ರಂವೋ ವಿಶ್ವತಸ್ಥರೀ ಎಂಬ ಅನುವಾಕದಲ್ಲೂ ಮಾಡಲಾಗಿದೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಹತ್ತೊಂಭತ್ತನೆಯ ಅನುವಾಕವು ಮುಗಿಯಿತು.

|| ಅಥ ವಿಂಶೋಽನುವಾಕಃ ||

**ಇಂದ್ರ, ಘೋಷ**

ಓ ಜಲರೂಪದಲ್ಲಿರುವ ಇಷ್ಟದೇವತೆಗಳೇ, ಪೂರ್ವ ದಿಕ್ಕಿನಲ್ಲಿ ಇಂದ್ರ, ಘೋಷ ಮೊದಲಾದವರು ಇತರ ದೇವತೆಗಳೊಡನೆ ದಕ್ಷಿಣ ದಿಕ್ಕಿನಲ್ಲಿ ಮನೋಜವಸ ಮೊದಲಾದ ಸಕಲ ಪಿತೃ ದೇವತೆಗಳೊಡನೆ ದಕ್ಷಿಣ, ಪಶ್ಚಿಮ ದಿಕ್ಕಿನಲ್ಲಿ ವರುಣನು ರುದ್ರರೊಡನೆ ಉತ್ತರ ದಿಕ್ಕಿನಲ್ಲಿ ವಿಶ್ವಕರ್ಮ ಆದಿತ್ಯರೊಡನೆ ಮೇಲ್ಭಾಗದಲ್ಲಿ ಬ್ರಹ್ಮ ರೂಪ ಪ್ರಧಾನರಾದ ದೇವತೆಗಳೊಡನೆ ಕೂಡಿಕೊಂಡು ನಿಮ್ಮನ್ನು ಸೇವಿಸುತ್ತಿದ್ದಾರೆ. ನಿಜವಾದ ಜ್ಞಾನವು ಯಾವಾಗಲೂ ನಿಮ್ಮನ್ನು ಆಶ್ರಯಿಸಿಕೊಂಡಿರುತ್ತದೆ ಎಂಬುದಾಗಿ ಈ ಆರು ಮಂತ್ರಗಳಲ್ಲಿ ಹೇಳಲಾಗಿದೆ.

**ಆದಿತ್ಯ**

ಸೂರ್ಯ ಸಂಬಂಧವಾದ ಶಾಖವೆಲ್ಲವೂ ಭೂಮಿಯಲ್ಲಿರುವ ವಾಯುವೂ, ಆಕಾಶದಲ್ಲಿರುವ ಸೂರ್ಯನೂ ಸ್ವರ್ಗಲೋಕದಲ್ಲಿರುವ ಚಂದ್ರನೂ ದಿಕ್ಕುಗಳಲ್ಲಿರುವ ನಕ್ಷತ್ರಗಳು ತಮ್ಮ ತಮ್ಮ ಲೋಕಗಳಲ್ಲಿರುತ್ತಾ ನಿಮ್ಮನ್ನು ಸೇವಿಸಲಿ ಎಂದು ಇಷ್ಟದೇವತೆಗಳಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ.

**ವಿವಾಹ್ಯೇವಾ**

ಓ ಸೂರ್ಯನೇ, ಓ ಅಗ್ನಿಯೇ, ಓ ವಾಯುವೇ, ಓ ಇಂದ್ರನೇ, ಓ ಪೂಷನೆಂಬ ಸೂರ್ಯನೇ, ಓ ದೇವತೆಗಳೇ ಪಡೆದುಕೊಳ್ಳಬಹುದಾದ ಎಲ್ಲಾ ಕೋರಿಕೆಗಳೂ ನೀವೇ ಆಗಿರುವಿರಲ್ಲ. (ಅರ್ಥಾತ್ ಎಲ್ಲಾ ಕೋರಿಕೆಗಳನ್ನೂ ನೀವೇ ಈಡೇರಿಸಬೇಕು.)

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತನೆಯ ಅನುವಾಕವು ಮುಗಿಯಿತು.

|| ಅಥ ಏಕವಿಂಶೋಽನುವಾಕಃ ||

**ಆಪಮಾಪ ... ದೇವಿಃ ಪರ್ಜನ್ಯ ... ಭದ್ರಂ ಕರ್ಣೇ ... ಕೇತವೋ ... ವ್ಯೋಮ ಸಂದೃಶಿ**

(ಮೊದಲನೆ ಅನುವಾಕದಲ್ಲಿ ಆಪಮಾಪಾದಲ್ಲಿಂದ ಬೃಹಸ್ಪತಿರ್ದಧಾತು ಹಾಗೂ ಶಿವಾನಶ್ಯಂತಮಾ .... ಸಂದೃಶಿ ವಾಕ್ಯಗಳಿಗೆ ಭಾವಾರ್ಥ ಕೊಟ್ಟಿರುವುದರಿಂದ ಮತ್ತೆ ಇಲ್ಲಿ ಕೊಟ್ಟಿಲ್ಲ.) ಕೇತು ಅರುಣ ವಾತರಶನ ಎಂಬ ಹೆಸರುಗಳಿಂದ ಕರೆಯಲ್ಪಡುವ ಸ್ಥಿರ ಮನಸ್ಕರೂ ಅನೇಕ ರೀತಿಯಲ್ಲಿ ಪ್ರಸಿದ್ಧರಾಗಿರುವವರೂ, ಅನೇಕ ವಿಧವಾದ

ಫಲಗಳನ್ನು ದಯಪಾಲಿಸುವ ಜಲರೂಪವಾದ ಇಷ್ಟದೇವತೆಯನ್ನು ಸೇವಿಸುತ್ತಿದ್ದಾರೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತೊಂದನೆಯ ಅನುವಾಕವು ಮುಗಿಯಿತು.

|| ಅಥ ದ್ವಾವಿಂಶೋಽನುವಾಕಃ ||

**ಯೋಽಪಾಂ ಪುಷ್ಪಂ ವೇದ .... ಯ ಏವಂ ವೇದ**

ಜಲಕ್ಕೆ ಕಾರಣ ಯಾವುದು ಎಂದು ವಿಚಾರ ಮಾಡುತ್ತಾರೋ ಅವರು ಪುನರಾವೃತ್ತಿರಹಿತವಾದ ಸ್ಥಾನವನ್ನು ಪಡೆಯುತ್ತಾರೆ. ಹೀಗೆ ವಿಚಾರ ಮಾಡಿದ ನಂತರ 'ಅಗ್ನೇರಾಪಃ' ಎಂಬ ಶ್ರುತಿ ಪ್ರಮಾಣದಿಂದ ಜಲಕ್ಕೆ ಅಗ್ನಿಯೇ ಕಾರಣ ಎಂದು ಯಾರು ತಿಳಿಯುತ್ತಾರೋ ಅವರು ಪುನರಾವೃತ್ತಿರಹಿತವಾದ ಸ್ಥಾನವನ್ನು ಪಡೆಯುತ್ತಾರೆ. ಈ ಅಗ್ನಿಗೆ ಆಧಾರ ಯಾವುದು ಎಂದು ವಿಚಾರ ಮಾಡಿದಾಗ ಅವಾಂತರ ಸೃಷ್ಟಿಯಲ್ಲಿನ ''ಆಪೋ ವ ಇದಮಾಗ್ರ ಆಸೀತ್'' ಎಂಬ ಶ್ರುತಿ ಪ್ರಮಾಣದಿಂದ ಸೃಷ್ಟಿಗೆ ಮೊದಲು ಜಲವಿದ್ದು, ಪ್ರಪಂಚ ಕಾರಣವಾಯಿತೆಂದೂ ಅಂತಹ ಪ್ರಪಂಚಾಂತರ್ವರ್ತಿಯಾದ ಅಗ್ನಿಗೆ ಜಲವೇ ಕಾರಣವೆಂದು ಯಾರು ತಿಳಿಯುತ್ತಾರೋ ಅವರು ಪುನರಾವೃತ್ತಿ ರಹಿತವಾದ ಸ್ಥಾನವನ್ನು ಪಡೆಯುತ್ತಾರೆ. ಇಲ್ಲಿ ಅಗ್ನಿಯಿಂದ ಜಲವು ಸೃಷ್ಟಿಯಾಯಿತೆನ್ನುವುದು ಮಹಾಸೃಷ್ಟಿಯಲ್ಲೆಂದೂ ಅಗ್ನಿಗೆ ಜಲವೇ ಆಧಾರವೆಂದೂ ಮತ್ತೆ ಹೇಳುವುದು ಅವಾಂತರ ಸೃಷ್ಟಿಯೆಂದೂ ತಿಳಿಯಬೇಕು. ಅದೇ ಪ್ರಕಾರ ಮುಂದಿನ ಎಲ್ಲಾ ವಾಕ್ಯಗಳನ್ನು ಅರ್ಥೈಸಬೇಕು.

**ಯೋಽಪಾ ... ವಾಯುರ್ವಾ ... ಯ ಏವಂ ವೇದ**

''ವಾಯುರಗ್ನಿಃ'' ಎಂಬ ಶ್ರುತಿ ಪ್ರಮಾಣದಿಂದ ವಾಯುವಿನ ಕಾರಣ ಅಗ್ನಿ, ಅಗ್ನಿಯ ಕಾರಣ ಜಲವಾಯಿತೆನ್ನುವುದರಿಂದ ಮಹಾಸೃಷ್ಟಿಯಲ್ಲಿ ಜಲಕ್ಕೆ ಅಗ್ನಿಯೇ ಕಾರಣ ಎಂದೂ ಅವಾಂತರ ಸೃಷ್ಟಿಯಲ್ಲಿ ಎಲ್ಲಕ್ಕೂ ಜಲವೇ ಕಾರಣವೆಂದೂ ಯಾರು ಅರಿಯುತ್ತಾರೋ ಅವರು ಪುನರಾವೃತ್ತಿ ರಹಿತವಾದ ಸ್ಥಾನವನ್ನು ಪಡೆಯುತ್ತಾರೆ.

**ಯೋಽಪಾಮಾಯತನಂ .... ಅಸೌವೈತಪನ್ನ .... ಯ ಏವಂ ವೇದ**

''ಆದಿತ್ಯಾಜ್ಜಾಯತೆ ವೃಷ್ಟಿಃ'' ಎಂಬ ಪ್ರಮಾಣದಿಂದ ಸೂರ್ಯನಿಂದ ಮಳೆಯುಂಟಾಗುತ್ತದೆ ಎಂದು ಹೇಳಿರುವ ಕಾರಣ ಜಲಕ್ಕೆ ಸೂರ್ಯನೇ ಸ್ಥಾನ (ಕಾರಣ) ಎಂದು ಮೇಲೆ ಹೇಳಿದ ರೀತಿಯಲ್ಲಿ ಜಲವು ಸೂರ್ಯನಿಗೆ ಸ್ಥಾನವೆಂದು ಯಾರು ತಿಳಿಯುತ್ತಾರೋ ಅವರು ಪುನರಾವೃತ್ತಿ ರಹಿತವಾದ ಸ್ಥಾನವನ್ನು ಪಡೆಯುತ್ತಾರೆ.

**ಯೋಽಪಾಂ .... ಚಂದ್ರಮಾ ... ಯ ಏವಂವೇದ**

ತುಷಾರ ವರ್ಷ (ಹಿಮದ ಮಳೆ)ದಂತಹ ತಂಪಾದ ಕಿರಣಗಳು ಚಂದ್ರನ ಸಂಬಂಧ ಹೊಂದಿರುವ ಕಾರಣ ಚಂದ್ರನು ಜಲಕ್ಕೆ ಹೇಗೆ ಕಾರಣವೋ ಹಾಗೆಯೇ ಜಲವು ಚಂದ್ರನಿಗೂ ಸ್ಥಾನ (ಮೂಲ) ಎಂದು ಯಾರು ತಿಳಿಯುತ್ತಾರೋ ಅಂತವರು ಪುನರಾವೃತ್ತಿ ರಹಿತ ಸ್ಥಾನ ಪಡೆಯುತ್ತಾರೆ.

**ಯೋಽಪಾಂ .... ನಕ್ಷತ್ರಾಣಾ .... ಯ ಏವಂವೇದ**

ನಕ್ಷತ್ರಗಳು ಮಳೆಯನ್ನುಂಟು ಮಾಡುತ್ತವೆ. ಆದ್ದರಿಂದ ಮಳೆ (ಜಲ)ಗೆ ನಕ್ಷತ್ರಗಳೇ ಮೂಲಸ್ಥಾನ. ಹಾಗೆಯೇ ಈ ಹಿಂದೆ ತಿಳಿಸಿರುವ ರೀತಿಯಲ್ಲಿ ನಕ್ಷತ್ರಗಳಿಗೆ ಜಲವೇ ಮೂಲಸ್ಥಾನ. ಈ ಮೂಲವನ್ನು ತಿಳಿದವರು ಪುನರಾವೃತ್ತಿ ರಹಿತ ಸ್ಥಾನವನ್ನುಪಡೆಯುತ್ತಾರೆ.

**ಯೋಽಪಾಂ .... ಪರ್ಜನ್ಯೋ .... ಯ ಏವಂವೇದ**

ಮೋಡಗಳು ಮಳೆ ತರುತ್ತವೆಂಬುದು ಲೋಕಪ್ರಸಿದ್ಧವಾದ ಮಾತು. ಮೋಡಗಳೇ ನೀರಿಗೆ ಆಧಾರ. ಸೂರ್ಯನ ಕಿರಣಗಳಿಂದ ನೀರು ಆವಿಯಾಗಿ ಮೋಡಗಳನ್ನು ಸೇರಿ ಮಳೆ ಸುರಿಸುತ್ತವೆ. ಆದ್ದರಿಂದ ಮೋಡಗಳಿಗೆ ನೀರೇ ಆಧಾರ. ಈ ಸಂಬಂಧವನ್ನು ಅರಿತವನು ಪುನರಾವೃತ್ತಿ ರಹಿತ ಸ್ಥಾನವನ್ನು ಪಡೆಯುತ್ತಾನೆ.

**ಯೋಽಪಾಂ ... ಸಂವತ್ಸರೋ ... ಯ ಏವಂವೇದ**

ವರ್ಷಋತುವಿನಲ್ಲಿ ಮಳೆಯಾಗುತ್ತದೆ. ಆ ವರ್ಷ ಋತುವು ಸಂವತ್ಸರಾಂತಃ ಪಾತಿ ಅಥವಾ ವರ್ಷ ಋತುವು ಸಂವತ್ಸರದಲ್ಲಿ ಒಳಗೊಂಡಿರುವುದರಿಂದ ವರ್ಷ ಋತುವಿನ ಮೂಲಸ್ಥಾನ ಸಂವತ್ಸರವು. ಸಂವತ್ಸರಕ್ಕೆ ಜಲವು ಮೂಲಸ್ಥಾನವೆಂದು ಯಾರು ಅರಿಯುತ್ತಾರೋ ಅವರು ಪುನರಾವೃತ್ತಿ ರಹಿತ ಸ್ಥಾನ ಪಡೆಯುತ್ತಾರೆ.

**ಯೋಽಪ್ಸು**

ಸಮಸ್ತ ಲೋಕಕ್ಕೂ ಜಲವೇ ಆಧಾರವಾದ್ದರಿಂದ ನಾವೆಯು ಹೇಗೆ ಜಲದಲ್ಲಿರುತ್ತದೆಯೋ ಹಾಗೆಯೇ ಈ ಲೋಕಗಳು ಜಲವನ್ನೇ ಆಧರಿಸಿವೆ ಎಂದು ಯಾರು ತಿಳಿಯುತ್ತಾರೋ ಅವರು ಶಾಶ್ವತವಾಗಿ ಪ್ರತಿಷ್ಠೆಯನ್ನು ಪಡೆದವರಾಗುತ್ತಾರೆ. (ನೀರಿನಲ್ಲಿ ನಾವೆಯು ಅತ್ತಿತ್ತ ಚಲಿಸುತ್ತದೆ. ಆದರೆ ಈ ಸಮಸ್ತ ಲೋಕಗಳೂ ನೀರಿನಲ್ಲಿದ್ದು ಸ್ಥಿರವಾಗಿ ಅಚಲವಾಗಿರುತ್ತವೆ.)

**ಅಪಾಗ್ಂ**

'ಆಪವಸಸರ್ಜಾದೌ' ಎಂಬ ಸ್ಮೃತ್ಯಾಧಾರ ರೀತ್ಯಾ ಮೊಟ್ಟಮೊದಲಿಗೆ ಪರಮಾತ್ಮನು ನೀರಿನಲ್ಲಿ ತನ್ನ ವೀರ್ಯವನ್ನು ಇಟ್ಟಿದ್ದರಿಂದ ಆ ವೀರ್ಯವು ಬಂಗಾರದ ಮೊಟ್ಟೆಯಾಯಿತು. ಆ ಮೊಟ್ಟೆಯಿಂದ ಲೋಕಗಳು ಹುಟ್ಟಿದವು ಎಂದು ಹೇಳುವುದರಿಂದ ಈ ಲೋಕಗಳೆಲ್ಲವೂ ಉದಕಸಾರವೆಂದು ಕರೆಯಲ್ಪಟ್ಟವು. ಅಂತಹ ಉದಕಸಾರದಲ್ಲಿ ಲೋಕ ಪೋಷಣೆಗಾಗಿ ಸೂರ್ಯಪ್ರಕಾಶ ವ್ಯವಸ್ಥೆಯುಂಟಾಯಿತು. ಉದಕಸಾರವೆನಿಸಿದ ಲೋಕಗಳಲ್ಲಿ ರಸಗಳಲ್ಲಿ ಉತ್ತಮವಾದ ಸೋಮರಸವನ್ನು ಸೇವಿಸಿ ಸ್ಥಿರವಾದ ಸ್ವರ್ಗಲೋಕವನ್ನು ಹೊಂದುತ್ತಾರೆ.

**ಇಮೇವೈ**

ಈ ಲೋಕಗಳು ಜಲದ ಸಾರವಾಗಿವೆ. ಈ ಲೋಕಗಳು ಸೂರ್ಯನ ಅಧೀನವಾಗಿವೆ. ಅಂದರೆ ಸೂರ್ಯನು ಮಳೆ ಸುರಿಸಿ ಪೋಷಿಸುವ ಮೂಲಕ ಲೋಕಗಳಿಗೆ ಆಧಾರವಾಗಿದ್ದಾನೆ.

**ಜಾನುದಘ್ನೇ**

ಸೂರ್ಯನನ್ನು ಕುರಿತು ಯಜ್ಞವನ್ನು ಆಚರಿಸುವವರು ಉತ್ತರ ದಿಕ್ಕಿನಲ್ಲಿ ಮೊಳಕಾಲು ಮಟ್ಟ ಯಜ್ಞಕುಂಡವನ್ನು ತೋಡಿ ಅದರಲ್ಲಿ ಹೆಜ್ಜೆ ಮುಳುಗುವಷ್ಟು ನೀರನ್ನುಳಿಸಿ ಅದರ ಮೇಲೆ ತಾವರೆ ಎಲೆ, ಕಾಂಡ ಮತ್ತು ಹೂಗಳನ್ನು ಮಂಚದ ಹಾಗೆ ಮುಚ್ಚಬೇಕು. ಅದರ ಮೇಲೆ ಅಗ್ನಿಯನ್ನು ಪ್ರಜ್ವಲಿಸಿ ಯಥಾವಿಧಿಯಿಂದ ಮಂತ್ರ ಗಳಿಂದ ಸಂಸ್ಕರಿಸಿ ಅಗ್ನಿಗೆ ಪರಿಸಮೂಹನ ಮಾಡಬೇಕು.

**ಬ್ರಹ್ಮವಾದಿನೋ**

ಕೆಲವು ಕಾರ್ಯಗಳಲ್ಲಿ ಮೊದಲು ಅಗ್ನಿಗೆ ಪರಿಸಮೂಹನಾದಿಗಳನ್ನು ಮಾಡಿ ನಂತರ ಸಂಸ್ಕರಿಸುತ್ತಾರೆ. ಇಲ್ಲಿ ಮೊದಲು ಅಗ್ನಿಯನ್ನು ಸಂಸ್ಕರಿಸಿ ನಂತರ ಪರಿಸಮೂಹನ ಮಾಡಬೇಕೆಂದು ಹೇಳುವ ಕಾರಣ ಏನೆಂಬುದನ್ನು ಬ್ರಹ್ಮವೇತ್ತರುಗಳು ಕೆಲವು ಸಮಾಧಾನ ರೂಪವಾಗಿ, ''ಇತರ ಕರ್ಮಗಳಲ್ಲಿ ಜಲಸಂಬಂಧ ಇರುವುದಿಲ್ಲ. ಈ ಕರ್ಮದಲ್ಲಿ ಜಲಸಂಬಂಧವಿರುವ ಅಗ್ನಿಯ ಕುರಿತು ಹೇಳಲಾಗುತ್ತದೆ. ಆದ್ದರಿಂದ ಇಲ್ಲಿ ಯಾವುದೇ ಆಕ್ಷೇಪವಿಲ್ಲ. ಅಲ್ಲದೆ ಈ ಪಕ್ಷದಲ್ಲಿ ಮೊದಲೇ ಅಗ್ನಿಯ ಸಂಸ್ಕರಣ ಮಾಡಬೇಕೆಂದು ಇರುವಾಗ ನಂತರ ಪರಿಸಮೂಹನಕ್ಕೆ ಕಾರಣವೇನು ಎಂಬುದಕ್ಕೆ ಸಮಾಧಾನ ಹೀಗಿದೆ. ಅನ್ಯ ಕರ್ಮಗಳಲ್ಲಿ ಅಗ್ನಿಗೆ ಜಲಸಂಬಂಧವಾದ ಭಯವಿರಲಿಲ್ಲ. ಈ ಅಗ್ನಿಯು ಜಲಸಹಿತವಾದ ಜಾಗದಲ್ಲಿ ಸ್ಥಾಪಿಸುವ ಕಾರಣ ಜಲದ ಭಯದಿಂದ ದೇವಯಜನವಿಲ್ಲದ ಲೋಕಕ್ಕೆ ಹೋಗಬೇಕಾಗುವುದೇನೋ ಎಂಬುದಾಗಿ ಹೋಗುವು

ದರಿಂದ ಅನಾಹಿತಾಗ್ನಿಯಾಗುವುದೆಂಬ ಉದ್ದೇಶದಿಂದ ಪರಿಸಮೂಹನ ವನ್ನು ಮಾಡಿ ಜಲಾಧಿ ದೇವತೆಗಳನ್ನು ರಕ್ಷಣೆಗಾಗಿ ಏರ್ಪಡಿಸಲಾಗಿದೆ. ಈ ರೀತಿ ಬ್ರಹ್ಮವೇತ್ತರು ಆಕ್ಷೇಪಣೆಗಳಿಗೆ ಸಮಾಧಾನ ರೂಪವಾದ ಪ್ರಸಂಗವನ್ನು ಹೊಗಳಿದ್ದಾರೆ.

## ಅಗ್ನಿಹೋತ್ರೇ

ಈ ಅರುಣಕೇತುಕಾಗ್ನಿ ಯಾವ ಯಾವ ಕರ್ಮಗಳಲ್ಲಿ ಉಪಯೋಗಿಸಲ್ಪಡುವುದೆಂಬುದನ್ನು ಬ್ರಹ್ಮವೇತ್ತರು ತಿಳಿಸುತ್ತಾ, ಅಗ್ನಿಹೋತ್ರದಲ್ಲಿ ಅಮಾವಾಸ್ಯೆ, ಪೂರ್ಣಿಮಾ ದಿನಗಳಲ್ಲಿ ದರ್ಶಪೂರ್ಣ ಮಾಸಗಳಲ್ಲಿ ಇಷ್ಟಿಗಳಲ್ಲಿ ಪಶು ಸಂಬಂಧವಾದ ಯಜ್ಞಗಳಲ್ಲಿ ಅರುಣಕೇತುಕಾಗ್ನಿಯು ಉಪಯೋಗಿಸಲ್ಪಡುತ್ತದೆಂದು ತಿಳಿಸುತ್ತಾರೆ.

## ಏತದ್ಧಸ್ಮ ವಾ

ಶಂಡಿಲನೆಂಬ ಮುನಿಯ ಸಂತತಿಯವರು ಶಾಂಡಿಲ್ಯರೆಂದು ಕರೆಯಲ್ಪಡುತ್ತಾರೆ (ಶಾಂಡಿಲ್ಯರು) ಈ ಶಂಡಿಲರು ಅರುಣಕೇತುಕಾಗ್ನಿಯನ್ನು ಆರಾಧಿಸುವುದಿರಂದ ಆಗುವ ಫಲವೇನು ಎಂದು ತಿಳಿಯಲು ಈ ಮೇಲಿನಂತೆ ಪ್ರಶ್ನೋತ್ತರಗಳಿಂದ ಸಂಭಾಷಿಸಿದರು. ಯಜ್ಞ ಸಂಬಂಧವಾದ ಅಗ್ನಿಯನ್ನು ಯಾವ ಫಲಕ್ಕಾಗಿ ಹೋಮಾದಿ ಕ್ರಿಯೆಗಳಿಂದ ಆರಾಧಿಸುತ್ತಾರೆಂದರೆ, ಯಜ್ಞಗಳಲ್ಲಿ ಅರ್ಪಿಸುವ ಹವಿದ್ರವ್ಯಗಳಿಂದ ದೇವತೆಗಳು ತೃಪ್ತರಾಗಿ ಮಳೆ ತರುತ್ತಾರೆ. ಮಳೆಯಿಂದ ಸಮಸ್ತ ಸಸ್ಯಗಳೂ ಫಲಿಸುತ್ತವೆ. ಅದರಿಂದ ವರ್ಷವೆಲ್ಲಾ ಸುಖಿಸುವಷ್ಟು ಪ್ರತ್ಯಕ್ಷ ಫಲ ದೊರೆಯುತ್ತದೆ ಎಂದರು.

## ಕಮಗ್ನಿಂ

ಸೂರ್ಯನನ್ನು ಕುರಿತು ಮಾಡುವ ಹೋಮಾದಿಗಳಿಂದ ಸೂರ್ಯನನ್ನು ಪ್ರತ್ಯಕ್ಷ ಮಾಡಿಕೊಂಡು ಸೂರ್ಯಮಂಡಲ ಮಧ್ಯಸ್ಥಿತ ಪರಮಾತ್ಮನನ್ನು ಸೇರುವರೆಂದು ಉತ್ತರಿಸಿದರು.

## ಕಮಗ್ನಿಂ

ನಾಚಿಕೇತ (ವಾಯುಸಂಬಂಧವಾದ) ಅಗ್ನಿಯನ್ನು ಆರಾಧಿಸುವುದರಿಂದ ಪ್ರಾಣ ವಾಯುವನ್ನು ಬಲಪಡಿಸುವ ರೂಪದಿಂದ ಪ್ರತ್ಯಕ್ಷ ಫಲವನ್ನು ಪಡೆಯಬಹುದು.

## ಕಮಗ್ನಿಂ

'ಬ್ರಹ್ಮಾವೈಚತುರ್ಹೋತಾರಃ' ಎಂದು ಹೇಳುವ ಪ್ರಕಾರ ಚಾತುರ್ಹೋತಾಗ್ನಿಯನ್ನು ಆರಾಧಿಸುವುದರಿಂದ ಬ್ರಹ್ಮ ದೈವತಾಕವಾದ ಪರಮಾತ್ಮ ಸ್ವರೂಪವನ್ನು (ವೇದ ಪುರುಷನನ್ನು) ಸೇರುವರೆಂದು ತಿಳಿಸಿದರು.

**ಕಮಗ್ನಿಂ**

ವಿಶ್ವಸೃಷ್ಟಿ ಸಂಬಂಧವಾದ ಅಗ್ನಿಯನ್ನು ಆರಾಧಿಸುವುದರಿಂದ ಬ್ರಹ್ಮ ಸಂಬಂಧವಾದ ಶರೀರ ಪ್ರಾಪ್ತಿಯಾಗುವುದೆಂದರು.

**ಕಮಗ್ನಿಂ**

'ಯದೇಕೇನ ಸ್ಥಾಪತಿ' ಉಪಮಾನುವಾಕ್ಯ ಕಾಂಡದಲ್ಲಿ ತಿಳಿಸಿರುವ ಅಗ್ನಿಯನ್ನಾರಾಧಿಸುವುದರಿಂದ ಸಮಸ್ತ ಲೋಕಗಳಲ್ಲಿ ಸಂಚರಿಸುವಂತಹ ಶಕ್ತಿ ದೊರೆಯುತ್ತದೆ ಎಂದರು.

**ಕಮಗ್ನಿಂ**

ಅರುಣ ಕೇತುಕಾಗ್ನಿಯನ್ನು ಆರಾಧಿಸುವುದರಿಂದ ಈ ಲೋಕವನ್ನು ಅತಿಕ್ರಮಿಸಿ ಹೋದರೆ ಅಲ್ಲಿ ಪ್ರಕಾಶಿಸುತ್ತಿರುವ ಸೂರ್ಯನನ್ನು ಹೊಂದಬಹುದೆಂದರು. ಶಂಡಿಲ ಮಹಾಮುನಿಯ ಸಂತತಿಯವರು, ಅರುಣ ಕೇತುಕಾಗ್ನಿಯಿಂದಾಗುವ ಫಲವನ್ನು ನಿರ್ಧರಿಸಿ ತಿಳಿಸಿದರು.

**ಯೋಗ್ನೇ**

ಈ ರೀತಿ ಅಗ್ನಿಗೂ ಜಲಕ್ಕೂ ಇರುವ ಸಂಬಂಧ ರೂಪವಾದ ಮಿಥುನ ಭಾವವನ್ನು ಯಾರು ತಿಳಿಯುತ್ತಾರೋ ಅವರು ಸ್ಥಿರವಾದ ದಾಂಪತ್ಯ ಧರ್ಮವುಳ್ಳವರಾಗುತ್ತಾರೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತೆರಡನೆಯ ಅನುವಾಕವು ಮುಗಿಯಿತು.

॥ ಅಥ ತ್ರಯೋವಿಂಶೋಽನುವಾಕಃ ॥

**ಆಪೋವಾ**

ಸೃಷ್ಟಿಗೆ ಸಂಬಂಧಿಸಿದ ವಿಚಾರವಾಗಿ ಹೇಳುವ ಉದ್ದೇಶದಿಂದ ಅರುಣ ಕೇತುಕಾಗ್ನಿಯನ್ನೂ ತದಂಗ ಜಲವನ್ನೂ ಪ್ರಶಂಸಿಸಲಾಗಿದೆ. ನಾವು ನೋಡುತ್ತಿರುವ ಪ್ರಪಂಚವೆಲ್ಲಾ ಸೃಷ್ಟಿಯ ಪೂರ್ವದಲ್ಲಿ (ಮೊದಲು) ಜಲವೇ ಆಗಿತ್ತು. ಬೇರೊಂದು ಭೂಮಿಯೆಂಬುದಿರಲಿಲ್ಲ. ಆ ಜಲರಾಶಿಯಲ್ಲಿ ತಾವರೆ ಎಲೆಯ ಮೇಲೆ ಪರಮಾತ್ಮನೊಬ್ಬನೇ ಇದ್ದನು. ಆ ಪರಮಾತ್ಮನಿಗೆ ಈ ಪ್ರಪಂಚವನ್ನೆಲ್ಲಾ ಸೃಷ್ಟಿಸಬೇಕೆಂದೆನಿಸಿತು. ಆದ್ದರಿಂದ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಮನುಷ್ಯನೂ ಈ ಕಾರ್ಯವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿ ಆ ಕುರಿತು ಕೆಲವು ಮಾತುಗಳನ್ನಾಡಿ ನಂತರ ಶರೀರ ವ್ಯಾಪಾರದಿಂದ ಮಾಡುತ್ತಿದ್ದಾನೆ (ಕರ್ಮವನ್ನಾಚರಿಸುತ್ತಿದ್ದಾನೆ). ಹೀಗೆಂದು ಇನ್ನೊಂದು ಶಾಖೆಯಲ್ಲೂ ಹೇಳಿದೆ.

**ಕಾಮಸ್ತದಗ್ರೆ**

ಪ್ರಜಾಪತಿಯ ನಿರ್ಧಾರದಿಂದ ಬೀಜರೂಪವು (ರೇತಸ್ಸು) ಹೊರಬಂದುದರಿಂದ ಈ ಪ್ರಪಂಚ ಸೃಷ್ಟಿಯ ಇಚ್ಛೆಯು ಪ್ರಕಾಶವಾಗಿ ಕಾರ್ಯೋನ್ಮುಖವಾಯಿತು. ಪ್ರತಿಕಲ್ಪದಲ್ಲೂ ಸೃಷ್ಟಿಕರ್ತನು ತನ್ನ ಮನಸ್ಸಿನಲ್ಲಿ ನಿಶ್ಚಯ ಮಾಡಿದವನಾಗಿ ಜೀವಿಗಳ ಕರ್ಮದೊಡನೆಯೇ ಪ್ರಳಯ ಕಾಲದಲ್ಲಿ ಅವರುಗಳನ್ನು ತನ್ನಲ್ಲಿ ಲೀನ ಮಾಡಿಕೊಂಡು, ಪ್ರಪಂಚ ನಿರ್ಮಾಣ ಕಾಲದಲ್ಲಿ ಮತ್ತೆ ತನ್ನ ಇಚ್ಛೆಯಂತೆ ಕರ್ಮಬಂಧನದೊಡನೆ ಜೀವಿಗಳ ಸೃಷ್ಟಿ ಮಾಡತೊಡಗುತ್ತಾನೆ.

**ಉಪೈನಂ**

ಹೀಗೆ ಯಾರು ಪ್ರಜಾಪತಿಯ ಇಚ್ಛಾಪ್ರಶಂಸೆಯನ್ನು ಅರಿತಿರುವರೋ ಅಂತಹವರು ತಮ್ಮ ಕೋರಿಕೆಯನ್ನು ಶೀಘ್ರದಲ್ಲಿಯೇ ಪಡೆಯುವವರಾಗುತ್ತಾರೆ.

**ಸತಪೋ**

ಪ್ರಜಾಪತಿಯ ಇಚ್ಛೆಯಿಂದಾದ ಸೃಷ್ಟಿಯಲ್ಲಿ, ಈಗಲೇ ಪ್ರಪಂಚದಲ್ಲಿನ ಬೇರೆ ಬೇರೆ ವಸ್ತುಗಳನ್ನು ಸೃಷ್ಟಿಸಬೇಕೆಂಬ ಅಭಿಲಾಷೆ ಉಂಟಾಗುತ್ತಿದ್ದಂತೆ ತನ್ನ ದೇಹದ ಮಾಂಸದಿಂದ ಅರುಣ, ಕೇತು, ವಾತರಶನರೆಂಬ ಮುರು ವಿಧದ ಋಷಿ ಸಂಘವನ್ನು ಸೃಜಿಸಿದನು. ನಂತರ ಅವನ ಉಗುರುಗಳಿಂದ ವೈಖಾನಸರು, ಕೂದಲಿನಿಂದ ವಾಲಿಖಿಲ್ಯರೆಂಬ ಮುನಿಗಳು ಉದ್ಭವಿಸಿದರು. ಪ್ರಜಾಪತಿಯ ಶರೀರ ಸಾರವು ನೀರಿನ ಮಧ್ಯದಲ್ಲಿ ಆಮೆಯ ಹಾಗೆ ಇದ್ದಿತು.

**ಅಂತರತಃ**

ನೀರಿನಲ್ಲಿ ಸಂಚರಿಸುತ್ತಿದ್ದ ಆಮೆಯನ್ನು ನೋಡಿ, ನನ್ನ ಶರೀರ ಸಂಬಂಧವಾದ ಚರ್ಮ, ಮಾಂಸ ಮೊದಲಾದುವುಗಳ ಸಾರ (ಪ್ರತಿರೂಪ)ವೇ ನೀನು ಎಂದು ಪ್ರಜಾಪತಿ (ಬ್ರಹ್ಮ)ಯು ಹೇಳಿದಾಗ "ನಿನಗಿಂತ ಮೊದಲಿನಿಂದಲೂ ನಾನಿಲ್ಲಿದ್ದೇನೆಂಬ ಆಮೆಯ ಮಾತಿಗೆ ಆ ಆಮೆಯು ಪರಾತ್ಪರ ಪರಮಾತ್ಮನೆಂದು ಪ್ರಜಾಪತಿಯು ಅರಿತನು. ಆಗ ಆ ಆಮೆಯು ಅನೇಕ ಶಿರಸ್ಸುಗಳು, ಅನೇಕ ನೇತ್ರಗಳೂ, ಅನೇಕ ಪಾದಗಳನ್ನು ಧರಿಸಿ ಪುರುಷ ರೂಪಿನಿಂದ ಕಾಣಿಸಿಕೊಂಡಿತು. ಆಗ ಬ್ರಹ್ಮನು ಆಮೆಗೆ ನಮ್ಮೆಲ್ಲರಿಗೂ ಮೊದಲಿನವನು ನೀನಾದ್ದರಿಂದ ಈ ಜಗತ್ಸೃಷ್ಟಿ ನೀನೇ ಮಾಡಬೇಕೆಂದು ಹೇಳಿದನು.

**ಸ ಇತ .... ಅಥಾರುಣ .... ಸೋರ್ಧ್ವಾದಿಕ್ .... ಯಾವಿಷ್ಪಷೋ .... ಆಪೋಯ ಯದ್ ಬೃಹತೀ .... ವಿಧಾಯ ..... ಸರ್ವಮೇವೇದ**

ಬ್ರಹ್ಮನು ಈ ರೀತಿ ಹೇಳಿದ ನಂತರ ಅರುಣಕೇತುವು ಸೃಷ್ಟಿ ಪೂರ್ವದಲ್ಲಿಯೂ

ಇದ್ದ ಆ ಜಲರಾಶಿಯಿಂದ ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು 'ಏನಾಹ್ಯೇವ' ಎಂಬ ಮಂತ್ರವನ್ನುಚ್ಚರಿಸುತ್ತಾ ಅಭಿಮಂತ್ರಿಸಿ ನಾವಿಂದು ಪೂರ್ವದಿಕ್ಕೆಂದು ವ್ಯವಹರಿಸುತ್ತಿರುವ ಕಡೆಗೆ ಬಿಟ್ಟನು. ಆಗ ಆ ದಿಕ್ಕಿನಿಂದ ಸೂರ್ಯನು ಉದಯಿಸಿದನು. ಆ ದಿಕ್ಕು ಪೂರ್ವ- ಎಂದು ಕರೆಯಲ್ಪಟ್ಟಿತು.

ಸೂರ್ಯನು ಹುಟ್ಟಿದ ನಂತರ ಆ ಅರುಣಕೇತುವು (ಪರಮಾತ್ಮ) ಬೊಗಸೆಯಲ್ಲಿ ನೀರು ತೆಗೆದುಕೊಂಡು 'ಏವಾಹ್ಯಗ್ನೇ' ಎಂಬ ಮಂತ್ರದಿಂದ ಅಭಿಮಂತ್ರಿಸಿ ನಾವಿಂದು ದಕ್ಷಿಣವೆಂದು ವ್ಯವಹರಿಸುತ್ತಿರುವ ದಿಕ್ಕಿಗೆ ಬಿಟ್ಟನು. ಆ ದಿಕ್ಕಿನಿಂದ ಅಗ್ನಿಯು ಉದ್ಭವಿಸಿತು. ಆ ದಿಕ್ಕಿಗೆ 'ದಕ್ಷಿಣ' ಎಂದು ಹೆಸರಾಯಿತು.

ಸೂರ್ಯನು ಹುಟ್ಟಿದ ನಂತರ ಆ ಅರುಣಕೇತುವು (ಪರಮಾತ್ಮನು) ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು 'ಏವಾಹಿ ವಾಯೋ' ಎಂಬ ಮಂತ್ರದಿಂದ ಅಭಿಮಂತ್ರಿಸಿ ನಾವಿಂದು ಪಶ್ಚಿಮವೆಂದು ವ್ಯವಹರಿಸುವ ಕಡೆಗೆ ಬಿಟ್ಟನು. ಅಲ್ಲಿಂದ ವಾಯುವು ಹೊರ ಬಂದನು. ಆ ದಿಕ್ಕಿಗೆ ಪಶ್ಚಿಮವೆಂದು ಹೆಸರಾಯಿತು.

ವಾಯುವು ಹುಟ್ಟಿದ ನಂತರ ಆ ಅರುಣಕೇತು ಪರಮಾತ್ಮನು ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು 'ಏವಾಹೀಂದ್ರ' ಎಂಬ ಮಂತ್ರದಿಂದ ಅಭಿಮಂತ್ರಿಸಿ ನಾವಿಂದು ಉತ್ತರವೆಂದು ವ್ಯವಹರಿಸುವ ಕಡೆಗೆ ಬಿಟ್ಟನು. ಅಲ್ಲಿಂದ ಇಂದ್ರನು ಹೊರಬಂದನು. ಆ ದಿಕ್ಕಿಗೆ ಉತ್ತರವೆಂದು ಹೆಸರಾಯಿತು.

ಅನಂತರ ಅರುಣಕೇತುವು ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು 'ಏವಾಹಿ ಪೂಷನ್' ಎಂಬ ಮಂತ್ರದಿಂದ ಅಭಿಮಂತ್ರಿಸಿ ಅದನ್ನು ಮಧ್ಯಭಾಗದಲ್ಲಿ ಬಿಟ್ಟನು. ಅಧೋದಿಕ್ಕೆಂದು ಕರೆಯಲ್ಪಟ್ಟು ಅದು ಭೂಮಿಯಾಯಿತು.

ಅನಂತರ ಅರುಣಕೇತುವು ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು 'ಏವಾಹಿ ದೇವಾಃ' ಎಂಬ ಮಂತ್ರದಿಂದ ಅಭಿಮಂತ್ರಿಸಿ ಮೆಲುಗಡೆಗೆ ಬಿಟ್ಟನು. ಆಗ ದೇವತೆಗಳು, ಮನುಷ್ಯರು, ಪಿತೃದೇವತೆಗಳು, ಗಂಧರ್ವರು, ಅಪ್ಸರೆಯರು ಮೊದಲಾದ ದೇವತೆಗಳು ಉದ್ಭವಿಸಿದರು. ಅದು ಊರ್ಧ್ವ ದಿಕ್ಕೆಂದು ಹೆಸರಿಸಲ್ಪಟ್ಟಿತ್ತು.

ಬೊಗಸೆಯಲ್ಲಿ ನೀರನ್ನು ಹಿಡಿಯುವಾಗ ಅತ್ತಿತ್ತ ಚೆಲ್ಲಿ ಹೋದ ನೀರಿನ ಹನಿಗಳಿಂದ ಅಸುರರು, ರಾಕ್ಷಸರು, ಪಿಶಾಚಿಗಳೆಂದು ಹೆಸರಾದ ಮೂರು ವಿಧವಾದ ರಾಕ್ಷಸರು ಉದ್ಭವಿಸಿದರು. ಬೊಗಸೆಯಿಂದ ಅತ್ತಿತ್ತ ಚೆಲ್ಲಿಹೋದ ಹನಿಗಳಿಂದ ಹುಟ್ಟಿದವರಾದ್ದರಿಂದ ಅವರು ದೇವತೆಗಳೊಡನೆ ಬೆರೆಯದೆ ಹೀನರಾಗಿ ದೇವತೆಗಳಿಂದ ಸೋಲನ್ನನುಭವಿಸುತ್ತಿದ್ದಾರೆ. ನೀರಿನಿಂದ ಸೃಷ್ಟಿಯಾದ ಈ ಜಗತ್ತನ್ನು

ಕುರಿತು ಈ ಮುಂದೆ ಹೇಳುವ ಮಂತ್ರಗಳು ತಿಳಿಸುತ್ತವೆ. ಬೃಹತ್ಸ್ವರೂಪರಾಗಿ ವೃದ್ಧಿಗೊಳ್ಳುವ ಸ್ವಭಾವದ ಗರ್ಭ ಧರಿಸಿರುವ, ಸ್ವಯಂ ಸಿದ್ಧವಾಗಿದ್ದು ಪರಮಾತ್ಮನಾಗಿರುವ ಕೂರ್ಮವನ್ನು ಸೃಷ್ಟಿಸಿರುವ ಜಲವು ಪ್ರಪಂಚರೂಪವಾದ ಗರ್ಭವನ್ನು ಧರಿಸಿದೆ. ಆದ್ದರಿಂದ ಆ ಜಲದಿಂದಲೇ ಈ ಲೋಕಗಳೆಲ್ಲವೂ ಸೃಷ್ಟಿಸಲ್ಪಟ್ಟಿವೆ. ಆದ್ಯಂತ ರಹಿತವಾದ ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಯಾವಾಗಲೂ ಇರುವಂತಹ ಕೂರ್ಮನಿಂದ ಈ ಜಗತ್ತು ಸೃಷ್ಟಿಯಾದ್ದರಿಂದ ಈ ಪ್ರಪಂಚವು ಸ್ವತಃಸಿದ್ಧ ಪರಮಾತ್ಮ ಸ್ವರೂಪವೆಂದು ಹೇಳಲ್ಪಟ್ಟಿದೆ. ನಶಿಸುವ ಸ್ವಭಾವದ ಜಲದಿಂದ ಹುಟ್ಟಿದ್ದರಿಂದ ಪ್ರಪಂಚವು ನಶ್ವರವೆಂದು ಯುಕ್ತಿಯಕ್ತವಾಗಿ ಸಾಧಿಸಲ್ಪಟ್ಟಿದೆ.

ಬ್ರಹ್ಮನು ತಾನು ಬೇರೊಂದು ಸಾಧನವಿಲ್ಲದೆಯೇ ತನ್ನ ಸ್ವರೂಪವನ್ನು ಜಗತ್ಕಾರಣವಾಗಿ ಪರಿಣಮಿಸಿ ಆಯಾ ಶರೀರಗಳಲ್ಲಿ ಜೀವರೂಪದಲ್ಲಿ ಪ್ರಕಾಶಿಸುತ್ತಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ಅಸತ್ ಎಂಬುದೇನಿದೆಯೋ ಅದು ನಶಿಸಿ ಸಚ್ಚಿದಾನಂದಾಂಶವಾಗಿ ನಿಂತಿರುತ್ತದೆ ಎಂದು ತಿಳಿಯಬೇಕು. ಈ ಕುರಿತು ಮುಂದಿನ ಮಂತ್ರದಲ್ಲಿ ಹೇಳಲಾಗುತ್ತದೆ.

ಗುಣರಹಿತನಾದ ಪರಬ್ರಹ್ಮನಿಂದ ಗುಣವಿಶಿಷ್ಟನಾದ ಬ್ರಹ್ಮನು ಮೊದಲಾಗಿ ಹುಟ್ಟಿ ಮೂರು ಲೋಕಗಳನ್ನೂ, ಪೂರ್ವ ಮೊದಲಾದ ಮುಖ್ಯ ದಿಕ್ಕುಗಳನ್ನೂ, ಆಗ್ನೇಯ ಮೊದಲಾದ ಉಪದಿಕ್ಕುಗಳನ್ನೂ ಪ್ರಾಣಶರೀರಗಳನ್ನೂ ಸೃಷ್ಟಿಸಿ ತನ್ನ ಸ್ವರೂಪವನ್ನು ತನ್ನಲ್ಲೇ ಸಮಸ್ತ ಪ್ರಪಂಚ ಸ್ವರೂಪದಲ್ಲಿ ಪ್ರಕಾಶಗೊಳಿಸಿ ಚೇತನ ರೂಪದಲ್ಲಿ ಸಮಸ್ತಪ್ರಾಣಿಗಳನ್ನು ಉಂಟು ಮಾಡಿದನು.

ಈ ಪ್ರಕಾರ ಏರ್ಪಟ್ಟ ಸೃಷ್ಟಿ ವಿಧಾನವನ್ನು ಯಾರು ಅರಿತಿರುತ್ತಾರೋ ಅವರು ಸಮಸ್ತ ಪ್ರಪಂಚದಲ್ಲಿ ಪರಬ್ರಹ್ಮನಿಗಿಂತ ಭಿನ್ನನೆಂದು ತಿಳಿದು ಸ್ವಾಧೀನ ಪ್ರಪಂಚರಾಗಿ ಈ ಪ್ರಪಂಚಾಂತರಾತ್ಮನಾದ ಪರಬ್ರಹ್ಮತ್ವವನ್ನು ಪಡೆಯುತ್ತಾರೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತಮೂರನೆಯ ಅನುವಾಕವು ಮುಗಿಯಿತು.

## ॥ ಅಥ ಚತುರ್ವಿಂಶೋನುವಾಕಃ ॥

**ಚತುಷ್ಟಯ್ಯ**

ನೀರಿನ ಸ್ಥಾನಗಳು ನಾಲ್ಕು- ಮೇಘ (ಮೋಡ), ವಿದ್ಯುತ್, ತುಷಾರ (ಮಂಜು), ಮಳೆ. ಈ ನಾಲ್ಕೂ ಮೇಘ ಸಂಬಂಧದಿಂದ ಒಂದೇ ಎನಿಸಿದರೂ ನಾಮಭೇದದಿಂದ

ನಾಲ್ಕಾಗಿ ಕರೆಯಲ್ಪಡುತ್ತಿವೆ. ಅವುಗಳಿಂದ ಉಂಟಾಗುವ ನೀರನ್ನು ಸಮಸ್ತ ಜೀವ ಜಂತುಗಳೂ ಗ್ರಹಿಸುತ್ತವೆ. ಈ ಯಥಾರ್ಥವನ್ನರಿತವರು ಮೇಘಾದಿಗಳನ್ನು ಸ್ವಾಧೀನ ಪಡಿಸಿಕೊಂಡವರಾಗುತ್ತಾರೆ.

**ಆತಪತಿ**

ಬಿಸಿಲು ಕಾಯುವ ಪ್ರದೇಶದಲ್ಲಿ ಬೀಳುವ ಮಳೆಯ ನೀರು ಪ್ರಕಾಶಪೂರ್ಣ ಸ್ಥಳದಲ್ಲಿ ಬೀಳುವುದರಿಂದ ಬ್ರಹ್ಮವರ್ಚಸ್ಸನ್ನು ಪಡೆಯುತ್ತದೆ. ಅಂತಹ ನೀರನ್ನು ಒಂದು ಪಾತ್ರೆಯಲ್ಲಿ ಸಂಗ್ರಹಿಸಿ ಅದನ್ನು ಯಜ್ಞ ಮಾಡುವ ಪ್ರದೇಶದಲ್ಲಿ ಸಮಂತ್ರಕವಾಗಿಟ್ಟರೆ ಅದು ಅಂದರೆ ಪೂರ್ವದಿಕ್ಕು ಅಗ್ನಿಮುಖವಾಗುವ ಕಾರಣ ಮುಖದಲ್ಲಿ ಬ್ರಹ್ಮವರ್ಚಸ್ಸು ಉಂಟಾಗುವಂತೆ ಲೋಕದಲ್ಲಿ ಬ್ರಾಹ್ಮಣರು ವೇದಶಾಸ್ತ್ರಗಳನ್ನು ತಮ್ಮ ಮುಖದಿಂದ (ಬಾಯಿಂದ) ಪಠಿಸುವ ಕಾರಣ ಅವರ ಮುಖದಲ್ಲಿ ವಿಶೇಷವಾದ ಬ್ರಹ್ಮವರ್ಚಸ್ಸು ಉಂಟಾಗುತ್ತದೆ.

**ಕೂಪ್ಯಾ**

ಬಾವಿಯಲ್ಲಿನ ನೀರನ್ನು ಗೃಹಕೃತ್ಯಗಳಿಗೆ ವಿಶೇಷವಾಗಿ ಉಪಯೋಗಿಸು ವುದರಿಂದ ತೇಜಃಪೂರ್ಣವಾಗಿರುತ್ತದೆ. ಅಂತಹ ಬಾವಿಯ ನೀರನ್ನು ತಂದು ಯಜ್ಞ ಮಾಡುವ ಪ್ರದೇಶದಲ್ಲಿ ದಕ್ಷಿಣ ಭಾಗದಲ್ಲಿ ಸಮಂತ್ರಕವಾಗಿ ಇಡುವುದರಿಂದ ಅಥವಾ ಪ್ರೋಕ್ಷಿಸುವುದರಿಂದ ಆ ಭಾಗವು ತೇಜಃಪೂರ್ಣವಾಗುತ್ತದೆ. ಹಾಗೆಯೇ ಮನುಷ್ಯರ ಬಲಭಾಗವು ತೇಜಃಪೂರ್ಣವಾಗಿರುವುದರಿಂದ ಬಲಗಡೆಗೆ ಪ್ರಾಶಸ್ತ್ಯವೆಂದು ಹೇಳಲಾಗಿದೆ.

**ಸ್ಥಾವರಾ**

ಮಡು ಅಥವಾ ಜಲಾಶಯದಲ್ಲಿನ ನೀರನ್ನು ತಂದು ಯಜ್ಞ ಪ್ರದೇಶದ ಪಶ್ಚಿಮದಲ್ಲಿ ಸಮಂತ್ರಕವಾಗಿ ಪ್ರೋಕ್ಷಿಸುವುದರಿಂದ ಅದು ಮಡುವಿನ ನೀರು ಹೇಗೆ ಚಲಿಸುವುದಿಲ್ಲವೋ ಹಾಗೆ ತಮ್ಮ ಸಂಬಂಧವುಳ್ಳವರನ್ನೂ ನಾಶರಹಿತ ಸ್ಥಿತಿಯಲ್ಲಿಟ್ಟಿರುತ್ತದೆ. ನಂತರ ಸ್ಥಿರತ್ವವನ್ನು ಪಡೆದ ಹಾಗಾಗುತ್ತದೆ.

**ವಹಂತೀ**

ನದಿಗಳ(ಲ್ಲಿನ) ನೀರನ್ನು ತಂದು ಯಜ್ಞ ಪ್ರದೇಶದ ಉತ್ತರ ದಿಕ್ಕಿನಲ್ಲಿಡಬೇಕು. ಆ ನದಿಯ ನೀರು ಯಾವ ಬಲದಿಂದ ಓಡುತ್ತದೋ, ನೀರಿನಲ್ಲಿ ಬಿದ್ದ ಕಡ್ಡಿ ಮೊದಲಾದುವುಗಳನ್ನು ಒಯ್ಯುವುದಕ್ಕೆ ಬಂಡೆಗಳಿಗೆ ತಗುಲಿ ಮೇಲಕ್ಕೆ ಚಿಮ್ಮಿ ಅಂದರೆ

ನೆಗೆದು ಕೆಳಕ್ಕೆ ಧುಮುಕಿ ಶಬ್ದ ಮಾಡುವುದಕ್ಕೆ ಎಂತಹ ಬಲವಿರುವುದೋ ಅಂತಹ ಬಲ ಉತ್ತರದಿಕ್ಕಿನಲ್ಲಿ ಉಂಟಾಗುತ್ತದೆ. ಆದ್ದರಿಂದ ಮನುಷ್ಯನ ಎಡಪಾರ್ಶ್ವದ ಪ್ರಕ್ಷಾಳನ ಮೊದಲಾದ ಹಲವು ಕಾರ್ಯಗಳನ್ನು ಬಲವತ್ತರವಾಗಿ ಹೇಳಲಾಗಿದೆ.

**ಸಂಭಾರ್ಯಾ**

ಮನೆಯಲ್ಲಿ ಬಿಂದಿಗೆ ಮೊದಲಾದ ಪಾತ್ರೆಗಳಲ್ಲಿ ಮುಚ್ಚಿಟ್ಟಿರುವ ನೀರನ್ನು ತಂದು ನಾಲ್ಕು ದಿಕ್ಕುಗಳ ಮಧ್ಯೆ ಹಾಕಬೇಕು. ಅದು ಯಾವ ರೀತಿ ಬಿಂದಿಗೆ ಮೊದಲಾದ ಪಾತ್ರೆಗಳಲ್ಲಿ ಮರೆಯಾಗಿರುತ್ತದೋ ಹಾಗೆ ಭೂಮಿಯಲ್ಲಿ ಚೆಲ್ಲಿದ ನೀರು ಮರೆಯಾಗಿರುತ್ತದೆ. ಬಿಂದಿಗೆಯ ನೀರು ಭೂಮಿಯಲ್ಲಿಂದಲೇ ತಂದು ದಾದ್ದರಿಂದ ಶ್ರೇಷ್ಠವೆನಿಸುತ್ತದೆ.

**ಪಲ್ವಲ್ಯಾ**

ಬೇಸಿಗೆಯಲ್ಲಿ ನೀರು ಇಂಗಿದಂತಾಗಿದ್ದರೂ ತೋಡಿದಾಗ ನೀರು ಸಿಕ್ಕುವ ತೊರೆಯಂತಹ ಸ್ಥಳದಲ್ಲಿನ ನೀರಿಗೆ ಪಲ್ವಲ್ಯಾ ಎಂದು ಕರೆಯಲಾಗುತ್ತದೆ. ಅಂತಹ ಸ್ಥಳದ ನೀರನ್ನು ತಂದು ಮೇಲ್ಭಾಗದಲ್ಲಿ ಚೆಲ್ಲಬೇಕು. ಹಾಗೆ ಚೆಲ್ಲಿದ ಕಾರಣದಿಂದ ಸ್ವರ್ಗಲೋಕ ಸ್ಥಿತಿಯನ್ನು ಹೊಂದುತ್ತಾರೆ. ವರ್ಷ ಋತುವಿನಲ್ಲಿ ಮೋಡಗಳಲ್ಲಿ ಇತರ ಋತುಗಳಲ್ಲಿ ಆವಿಯ ರೂಪದಲ್ಲಿ ಸೂರ್ಯನ ಕಿರಣದಲ್ಲಿ ಯಾವಾಗಲೂ ಒರತೆಯ ಹಾಗಿದ್ದು ಸ್ವರ್ಗ ಸದೃಶವಾಗಿರುತ್ತದೆ.

**ದಿಕ್ಷೂಪ**

ದಿಕ್ಕುಗಳಿಗೆ ನೀರನ್ನು ಪ್ರೋಕ್ಷಿಸುವುದರಿಂದ ದಿಕ್ಕುಗಳಲ್ಲಿ ಮೋಡಗಳು ಆವರಿಸಿ ಮಳೆ ತರುತ್ತವೆ. ಆ ಮಳೆಯ ನೀರಿನಿಂದ ಆಹಾರವು ಬೆಳೆಯುತ್ತದೆ. ಆಹಾರಕ್ಕೆ ಕಾರಣವಾದ ಆಧಾರಭೂತವಾದ ನೀರು ಇರುವುದರಿಂದ ದಿಕ್ಕುಗಳಿಗೆ ಸಮ್ಮಾರ್ಜನೆ ಮಾಡುವುದರಿಂದ ಅನ್ನವನ್ನು ಪಡೆದವರಾಗುತ್ತಾರೆ.

**ತಂವಾಏತಮರುಣಾ**

ಅರುಣರು, ಕೇತುಗಳು, ವಾತರಶನರು ಎಂಬ ಮೂರು ವಿಧದ ಮುನೀಶ್ವರರಿಂದ ಪೂಜಿಸಲ್ಪಡುವ ಕಾರಣ ಅಗ್ನಿಹೋತ್ರವು ಅರುಣಕೇತುಕಾಗ್ನಿಯೆಂದು ಕರೆಯಲ್ಪಡುತ್ತಾನೆ.

**ತದೇಷಾ**

ಅಗ್ನಿಗೆ ಅರುಣ ಕೇತುಕ ಸಂಬಂಧದ ಕುರಿತು ಮುಂದೆ ಹೇಳುವ ಮಂತ್ರದಿಂದ ಗೊತ್ತಾಗುತ್ತದೆ.

**ಕೇತವೋ**

ಕೇತುಗಳು, ಅರುಣರು, ವಾತರಶನರೆಂಬ ಮೂರು ವಿಧದ ಮುನೀಶ್ವರರು ಸ್ವಸ್ಥಚಿತ್ತರಾಗಿ ಅನೇಕ ವಿಧವಾದ ಪ್ರತಿಷ್ಠಾಪೂರ್ಣ ಫಲಗಳನ್ನು ಪಡೆಯುವಂತಹ ಅಗ್ನಿಯನ್ನು ಪೂಜಿಸಿದ್ದಾರೆಂದು ಬೇರೆ ಶಾಖೆಯಲ್ಲಿ ಹೇಳಲಾಗಿದೆ.

**ಶತಶಚ್ಛೈವ**

ಈ ರೀತಿಯ ಅಗ್ನಿಯನ್ನು ಯಾರೂ ಅರಿತಿರುತ್ತಾರೋ ಮತ್ತು ಪೂಜಿಸುತ್ತಾರೋ ಅವರು ನೂರಾರು ಸಹಸ್ರಾರು ವಿಧವಾದ ಶ್ರೇಷ್ಠತೆಯನ್ನು ಹೊಂದುತ್ತಾರೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತನಾಲ್ಕನೆಯ ಅನುವಾಕವು ಮುಗಿಯಿತು.

|| ಅಥ ಪಂಚವಿಗ್ಂಶೋನುವಾಕಃ ||

**ಜಾನುದಘ್ನೀ**

ಮೊಳಕಾಲು ಮಟ್ಟದ ಆಳಕ್ಕೆ ಉತ್ತರ ದಿಕ್ಕಿನಲ್ಲಿ ನೆಲವನ್ನು ತೋಡಿ ಯಜ್ಞಕುಂಡವನ್ನು ಮಾಡಿ ನೀರನ್ನು ತುಂಬಿ ಎಲ್ಲಾ ಪದಾರ್ಥಗಳಿಗೂ ಜಲದ ವ್ಯಾಪಕತ್ವ ಉಂಟಾಗಲೆಂದು ಮಾಡುತ್ತಾರೆ.

**ಪುಷ್ಕರ**

ತಾವರೆ ಎಲೆ ಪವಿತ್ರವಾಗಿರುವುದರಿಂದ ತನ್ನ ಸ್ವರೂಪವನ್ನಾಗಲೀ ಬಂಗಾರವು ಕರಗಿಸಲ್ಪಡುವುದರಿಂದ ತನ್ನ ನಿಜಸ್ವರೂಪವನ್ನಾಗಲೀ ಕಳೆದುಕೊಳ್ಳುವುದಿಲ್ಲ. ವಿರಾಟ್ಪುರುಷನಾದ ಪರಮಾತ್ಮನು ಆದ್ಯಂತರಹಿತನೂ, ಅಮೃತಸ್ವರೂಪನೂ ಆಗಿರುವನೆಂದು ಕರೆಯಲ್ಪಡುವುದರಿಂದ (ಆಗಿರುವುದರಿಂದ) ಆ ತಾವರೆಎಲೆಯನ್ನೂ ಬಂಗಾರವನ್ನೂ ಮತ್ತು ಪರಮಾತ್ಮನನ್ನೂ ಧ್ಯಾನ ಮಾಡಬೇಕು. ಹಾಗೆ ಮಾಡುವುದರಿಂದ ಆ ತಾವರೆ ಎಲೆ ಮೊದಲಾದುವುಗಳ ಪಾವಿತ್ರ್ಯದಂತೆಯೇ ಯಜಮಾನನೂ ಪವಿತ್ರನಾಗುತ್ತಾನೆ.

**ಕೂರ್ಮ**

ಪರಮಾತ್ಮ ಸ್ವರೂಪನಾದ, ನೀರಿನಲ್ಲಿರುವ ಆ ಆಮೆಯನ್ನು ಯಜ್ಞರೂಪದಲ್ಲಿ ಧ್ಯಾನಿಸುವುದರಿಂದ ಸಮಸ್ತ ವಸ್ತುಗಳ ಸಾರ ಹಾಗೂ ಸ್ವರ್ಗಲೋಕವನ್ನು ಪಡೆಯುವವನಾಗುತ್ತಾನೆ.

**ಅಪಮಾಪಾ**

ಮೊದಲನೆಯ ಅನುವಾಕದಲ್ಲಿ ಈ ಮಂತ್ರದ ತಾತ್ಪರ್ಯ ಕೊಟ್ಟಿದೆ.

**ಲೋಕಂಪೃಣ**

ಜಲರೂಪಿಗಳಾದ ಇಷ್ಟಿಗಳೇ ಲೋಕದಲ್ಲೆಲ್ಲಾ ನೀವು ತುಂಬಿರುವುದರಿಂದ ಅಗ್ನಿಹೋತ್ರ ಸಂಬಂಧವಾದ ರಂಧ್ರಗಳನ್ನು ಮುಚ್ಚಿರಿ. ಉತ್ತಮ, ಮಧ್ಯಮ, ಅಧಮ ಎಂದು ಮೂರು ವಿಧಗಳಲ್ಲಿರುವ ಈ ಶ್ರೇಷ್ಠವಾದ ಮಾತೃಗಣವನ್ನು ಭರಿಸಿರಿ.

**ಇಂದ್ರಘೋಷಾ**

''ಇಂದ್ರಘೋಷಾ ವಸುಭಿ'' ''ಏವಾಹ್ಯೇವ'' ಎಂಬ ಮಂತ್ರಗಳಿಂದ ಇಷ್ಟಿಯ ಉಪಧಾನ ಮಾಡಬೇಕು.

**ಪಂಚಚಿತಯ**

ಮೊಳಕಾಲ ಮಟ್ಟದ ಗುಂಡಿಯನ್ನು ತೋಡಿ ಅದನ್ನು ನೀರಿನಿಂದ ತುಂಬಿ ಅದರ ಮೇಲೆ ತಾವರೆ ಎಲೆ, ತಾವರೆ ದಂಟು ತಾವರೆ ಹೂಗಳನ್ನಿಟ್ಟು ಅದರ ಮೇಲೆ ಇಟ್ಟಿಗೆಗಳನ್ನಿಟ್ಟು ಮತ್ತೆ ಅದರ ಮೇಲೆ ತಾವರೆ ಎಲೆ, ದಂಟು, ಹೂಗಳನ್ನಿಟ್ಟು ಐದು ಹಂತಗಳನ್ನು ಮಾಡುವುದರಿಂದ ಐದು ಕೋಣೆಗಳುಳ್ಳ ಅಗ್ನಿ, ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಸಭ್ಯ, ಅವಸಥ ರೂಪಗಳೆಂಬ ಹೆಸರುಗಳಿಂದ ಕರೆಯಲ್ಪಟ್ಟು ಐದು ಚಿತೆಗಳನ್ನೂ ಹೊಂದಿದವನಾಗುವನು. ಅಂತಹ ಪಂಚ ಕಕ್ಷಾನ್ವಿತನಾದ ಅಗ್ನಿಯನ್ನು ಆರಾಧಿಸಬೇಕು.

**ಲೋಕಂಪೃಣಯಾ**

ಲೋಕಂಪೃಣನೆಂಬ ಸರ್ವ ವ್ಯಾಪಕತ್ವವಿರುವ ಹಾಗೂ ಛಿದ್ರಂಪೃಣನೆಂಬ ರಂಧ್ರಗಳಲ್ಲಿ ವ್ಯಾಪಕತ್ವವಿರುವ ಎರಡು ಇಷ್ಟಿಗಳಿವೆ. ಸರ್ವವ್ಯಾಪಕತ್ವವಿರುವ ಲೋಕಂಪೃಣವೆಂಬ ಇಷ್ಟಿಕೆಯನ್ನು ಇಡುವುದರಿಂದ ಅದು ಸರ್ವವ್ಯಾಪಿ ವಿರಾಟ್ ಪುರುಷನ ದೇವಸ್ವರೂಪವಾಗಿ ಐದು ಪಾದಗಳಾಗುತ್ತದೆ. ಭೂಲೋಕ, ಆಕಾಶ, ಸ್ವರ್ಗಲೋಕ, ದಿಕ್ಕುಗಳು, ರಜೋಗುಣದಿಂದ ಕೂಡಿದ ಸಂಸಾರವನ್ನು ಅತಿಕ್ರಮಿಸಿದ ಚೈತನ್ಯ. ಹೀಗೆ ಐದು ಪಾದಗಳಾಗುತ್ತವೆ.

**ವಿರಾಜ್ಯೇವ**

ಯಾರು ಈ ಅಗ್ನಿಹೋತ್ರನನ್ನು ಪೂಜಿಸುತ್ತಾರೋ ಅಥವಾ ಅಗ್ನಿಹೋತ್ರವನ್ನು ಮಹಿಮಾನ್ವಿತವೆಂದು ತಿಳಿಯುತ್ತಾರೋ ಅವರು ಅನ್ನ (ಧಾನ್ಯವೆಂಬ ಐಶ್ವರ್ಯ)ವನ್ನು ವಿರಾಟ್‌ಪುರುಷನ ಜೀವಸ್ವರೂಪವನ್ನು ಪಡೆಯುವರು.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತೈದನೆಯ ಅನುವಾಕವು ಮುಗಿಯಿತು.

॥ ಅಥ ಷಡ್ವಿಂಶೋಽನುವಾಕಃ ॥

**ಅಗ್ನಿಂಪ್ರಣೀಯೋ**

ಈ ಮಂತ್ರದ ಅರ್ಥವನ್ನು ಯೋಽಪಾಂ ಪುಷ್ಪಂ ವೇದ ಎಂಬ ಅನುವಾಕದಲ್ಲಿ ಕೊಟ್ಟಿದೆ. ಕೆಲವು ಫಲವಿಶೇಷಗಳನ್ನೂ, ವ್ರತ ವಿಶೇಷಗಳನ್ನು ಹೇಳಬೇಕಾದ ಕಾರಣ ದಿಂದ ಈ ಅನುವಾಕದಲ್ಲೂ ಹೇಳಲಾಗಿದೆ.

**ಅಥಹಸ್ಮಾರುಣ**

ಸಮಸ್ತ ಅಗ್ನಿಹೋತ್ರಗಳೂ ಸಾವಿತ್ರವೆಂಬ ಅಗ್ನಿಪೂರ್ವಕವಾಗಿವೆ ಎಂದು ಸ್ವಯಂಭು ಮಗನಾದ ಅರುಣನನ್ನು ಋಷಿಗಳು ಪ್ರಶ್ನಿಸಿದಾಗ ಅವನು ಉತ್ತರಿಸಿದನು. ಈ ಅಗ್ನಿಗಳಿಗೆ ಬೇರೆ ಬೇರೆ ಫಲಗಳಿವೆ. ಆದ್ದರಿಂದ ಪರಸ್ಪರ ಸಂಬಂಧವನ್ನು ಭಾವಿಸಬೇಕಾಗಿಲ್ಲ. ಈ ಬೇರೆ ಅಗ್ನಿಗಳ ಫಲವನ್ನು ''ಯೋಽಪಾಂ ಪುಷ್ಪಂ ವೇದ'' ಎಂಬ ಅನುವಾಕದಲ್ಲಿ ವಿವರಿಸಲಾಗಿದೆ. ಈ ಮುಂದಿನ ಮಂತ್ರಗಳೇ ಆ ಸಂಬಂಧವಾದ ಪ್ರಶ್ನೋತ್ತರಗಳು ಕಮಗ್ನಿಂ ಚಿನುತೆ .... ಸತ್ರಿಯ ... ಸಾವಿತ್ರ... ನಾಚಿಕೇತ ... ಚಾತುರ್ .... ವೈಶ್ವ ... ಉಪಾನು ... ಇಮ ಮಾರುಣ ಎಂಬುವು.

**ವೃಷಾ**

ಅಗ್ನಿಯನ್ನು ಆರಾಧಿಸುವವರು ವೀರ್ಯವಂತರಾಗಿ ಸಂತಾನ ಪಡೆಯಲು (ಯುವ) ಸಮರ್ಥರಾಗುತ್ತಾರಾದ್ದರಿಂದ ಅಗ್ನಿಗಳಿಗೆ ಸಂಬಂಧ ಕಲ್ಪಿಸುವುದರಿಂದ ಯಜಮಾನನ (ಆರಾಧಕನ) ವೃಷಣಗಳನ್ನು ಪೀಡಿಸಿದಂತಾಗುತ್ತದೆ. ಆತನ ಆರಾಧನೆಯು ಹಾಳಾಗುತ್ತದೆ. ಅಗ್ನಿಗಳೆಲ್ಲವೂ ಸ್ವತಂತ್ರವಾದವು. ಆದ್ದರಿಂದ ಅರುಣಕೇತುಕಾಗ್ನಿಗೆ ಆರಾಧನೆಯಲ್ಲಿನ ಭಾಗವನ್ನು ಹೇಳಬೇಕೆಂದು ಕೆಲವು ಮುನಿಗಳು ನಿರ್ಧರಿಸಿರುತ್ತಾರೆ.

**ಸೋತ್ತರವೇದಿಷು**

ಉತ್ತರ ವೇದಿಕೆಯಲ್ಲಿ ಅರುಣಕೇತುಕಾಗ್ನಿಯು ಆರಾಧಿಸಲ್ಪಡುತ್ತಾನಾದ್ದರಿಂದ ಪಶುಬಂಧವೇ ಮೊದಲಾದ ಯಾಗಗಳಿಂದ ಅರುಣಕೇತುಕಾಗ್ನಿಯನ್ನು ಆರಾಧಿಸಬೇಕು.

**ಪ್ರಜಾಕಾಮ**

ಸಂತಾನಾಪೇಕ್ಷಿಗಳು ಈ ಅಗ್ನಿಯನ್ನು ಆರಾಧಿಸಬೇಕು. ಪ್ರಜಾಪತಿಯಿಂದ ಅಗ್ನಿಯು ಸೃಷ್ಟಿಸಲ್ಪಟ್ಟನಾದ್ದರಿಂದ ಪ್ರಾಜಾಪತ್ಯನೆನಿಸಿದನು. ಮನುಷ್ಯರು ಪ್ರಜಾಪತಿಯಿಂದ ಸೃಜಿಸಲ್ಪಟ್ಟರಾದ್ದರಿಂದ ಅವರು ಪ್ರಾಜಾಪತ್ಯರೆನಿಸಿದರು. ಪ್ರಾಜಾಪತ್ಯ ಸಂಬಂಧದಿಂದಾಗಿ ಪ್ರಜಾಸಂಬಂಧವಾದ ಫಲವನ್ನು ಕೊಡುವವನಾಗುತ್ತಾನೆ. ಈ ರೀತಿ ಯಾರು ಅರಿತು ನಡೆಯುತ್ತಾರೋ ಅವರು ಸಂತಾನವನ್ನು ಪಡೆಯುತ್ತಾರೆ.

**ಪಶುಕಾಮ**

ಪಶುಗಳು ದಾಹ ನಿವಾರಿಸಿಕೊಳ್ಳಲು ನೀರು ಎಲ್ಲಿದೆಯೋ ಅಲ್ಲಿಗೆ ಹುಡುಕಿಕೊಂಡು ಹೋಗುತ್ತವೆಯಾದ್ದರಿಂದ ನೀರು ಪಶುಗಳಿಗೆ ಜ್ಞಾನ ಸಾಧನವಾಯಿತು. ಅಂತಹ ಜಲಸಂಬಂಧವಾದ ಯಜ್ಞ ಮಾಡಿದರೆ ಅಗ್ನಿಯಿಂದ ಜಲವು ಹುಟ್ಟುವುದರಿಂದ ಅಗ್ನಿಯನ್ನು ಪೂಜಿಸಿದಂತಾಗುತ್ತದೆ. ಈ ಪ್ರಕಾರ ಯಾರು ಅರಿಯುತ್ತಾರೋ ಅವರು ಪಶುಗಳನ್ನು ಹೊಂದುತ್ತಾರೆ.

**ವೃಷ್ಟಿ ಕಾಮ**

ಮಳೆಯನ್ನು ಅಪೇಕ್ಷಿಸುವವರು ಆ ಜಲ ಸಂಬಂಧವಾದ ಯಜ್ಞವನ್ನು ಮಾಡಬೇಕು. ಇದನ್ನು ಯಾರು ಅರಿತಿರುತ್ತಾರೋ ಅವರಿಗೆ ಜಲ ಸಂಬಂಧವಾದ ಅನುಕೂಲವಾಗುತ್ತದೆ.

**ಆಮಯಾವೀ**

ತಾಪದಿಂದ (ಬಿಸಿಲು, ಬೇಗೆ) ಪೀಡಿತರಾದವರು ನೀರೆಂಬ ಔಷಧಕ್ಕಾಗಿ ಅರಸುತ್ತಾರೆ. ಈ ನೀರು ಔಷಧವಾಗಿ ಕೆಲಸ ಮಾಡುತ್ತದೆ. ಆದಕ್ಕಾಗಿ ಅವರು ಯಜ್ಞ (ಜಲದೇವತೆಯನ್ನು ಆರಾಧಿಸುತ್ತಾರೆ) ಮಾಡುತ್ತಾರ. ಅದರ ಫಲವಾಗಿ ಆಯಸ್ಸು ಆರೋಗ್ಯವನ್ನು ಪಡೆಯುತ್ತಾನೆ.

**ಅಭಿಚರಗ್ನ**

ಯಾರಾದರೂ ಜ್ಞಾತಿವರ್ಗದಿಂದ ವಜ್ರಾಯುಧ ಮೊದಲಾದುವುಗಳಿಂದ ಪ್ರಯೋಗಿಸಲ್ಪಟ್ಟು ತಿರಸ್ಕರಿಸಲ್ಪಟ್ಟವರಾಗಿದ್ದರೆ ಈ ಜಲಸಂಬಂಧವಾದ ಯಜ್ಞವನ್ನು ಮಾಡುವುದರಿಂದ ಜಲವೇ ವಜ್ರಾಯುಧ ರೂಪವಾಗಿ ಶತೃಗಳಿಂದಾದ ಪ್ರಯೋಗವನ್ನು ದೂರ ಮಾಡುತ್ತದೆ. (ಕಠಿಣತರವಾದ ಆಭಿಚಾರಿಕ ಆಪತ್ತಿನಿಂದ ದೂರ ಮಾಡುತ್ತದೆ)

**ತೇಜಸ್ಕಾಮೋ**

ಸಂತಾನಾಪೇಕ್ಷೆ, ಪಶುಸಂಪತ್ತಿನ ಅಪೇಕ್ಷೆ, ಸ್ವರ್ಗಾಪೇಕ್ಷೆ, ತೇಜಸ್ಸು, ಯಶಸ್ಸು, ಬ್ರಹ್ಮವರ್ಚಸ್ಸು, ಹೀಗೆ ಏನೆಲ್ಲ ಅಪೇಕ್ಷೆಗಳಿವೆಯೋ ಅವು ಈ ಜಲಸಂಬಂಧವಾದ ಯಜ್ಞವನ್ನು ಮಾಡುವುದರಿಂದ ಸಿದ್ಧಿಸುತ್ತವೆ.

**ತಸ್ಯೈತ**

ಅರುಣಕೇತುಕಾಗ್ನಿ ಯಜ್ಞವನ್ನು ಮಾಡುವವರು ಮಳೆಯಲ್ಲಿ ನಡೆಯಬಾರದು. (ಓಡಬಾರದು) ಏಕೆಂದರೆ ಜಲವು ಅಮೃತ ಸ್ವರೂಪವಾದುದು. ಆದ್ದರಿಂದ ಮಳೆಯಲ್ಲಿ ನಡೆಯುವುದರಿಂದ ಅಮೃತತ್ವವು ಇಲ್ಲವಾಗುತ್ತದೆ. ಜಲದಲ್ಲಿಂದ ಅಮೃತತ್ವವು ಹಾಳಾದಂತೆಯೇ ಸ್ವರ್ಗಪ್ರಾಪ್ತಿ ಕೂಡ.

**ನಾಪ್ಸು ಮೂತ್ರ**

ಅರುಣಕೇತುಕಾಗ್ನಿಯು ನೀರಿನಲ್ಲಿ ಅಗೋಚರನಾಗಿರುತ್ತಾನೆ. ಆದ್ದರಿಂದ ನೀರಿನಲ್ಲಿ ಮಲ, ಮೂತ್ರ ವಿಸರ್ಜನೆ ಮಾಡಬಾರದು. ಉಗುಳಬಾರದು. ನಗ್ನರಾಗಿ ಸ್ನಾನ ಮಾಡಬಾರದು. ಹಾಗೆ ಮಾಡುವುದರಿಂದ ಅಗ್ನಿಯು ದಹಿಸದಂತಾಗುತ್ತದೆ.

**ನ ಪುಷ್ಕರ**

ತಾವರೆ ಎಲೆ ಹಾಗೂ ಬಂಗಾರದಲ್ಲಿ ಅಗ್ನಿಯಿರುತ್ತದೆ. ಆದ್ದರಿಂದ ಅವುಗಳನ್ನು ಎಸೆಯಬಾರದು. ಹಾಗೆ ಮಾಡುವುದರಿಂದ ಅಗ್ನಿಯನ್ನು ಎಸೆದಂತಾಗುತ್ತದೆ. (ದೂರ ಮಾಡಿದಂತಾಗುತ್ತದೆ.)

**ನ ಕೂರ್ಮ**

ಆಮೆಯ ಅವಯವಗಳನ್ನು ತಿನ್ನಬಾರದು. ಜಲಜೀವಿಗಳಾವುದನ್ನೂ ತಿನ್ನಬಾರದು. ಯಾರು ಅರುಣಕೇತುಕಾಗ್ನಿಯನ್ನು ಆರಾಧಿಸುತ್ತಾರೋ ಅವರು ಮೇಲೆ ಹೇಳಿದ ರೀತಿ ನಡೆದುಕೊಳ್ಳುವುದರಿಂದ ಜಲಜಂತುಗಳಾಗಲೀ ಜಲವಾಗಲೀ ಅವರನ್ನು ಬಾಧಿಸುವುದಿಲ್ಲ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತಾರನೆಯ ಅನುವಾಕವು ಮುಗಿಯಿತು.

॥ ಅಥ ಸಪ್ತವಿಗ್ಂಶೋನುವಾಕಃ ॥

**ಇಮಾನುಕಂ**

ನಾವು ಅರುಣಕೇತುವನ್ನಾರಾಧಿಸುವುದರಿಂದ ಇಂದ್ರನೂ ವಿಶ್ವೇದೇವತೆಗಳೂ,

ನಾವು ಈ ಲೋಕಗಳಲ್ಲಿ ಸುಖವಾಗಿರುವಂತೆ ಮಾಡುತ್ತಿರಲಿ. ಇಂದ್ರನು ದೇವತೆಗಳೊಡನೆ ನಾವು ಮಾಡುವ ಯಜ್ಞ, ನಮ್ಮ ದೇಹಾರೋಗ್ಯ, ನಮ್ಮ ಸಂತಾನಗಳನ್ನು ಚೆನ್ನಾಗಿರುವಂತೆ ಮಾಡುತ್ತಿರಲಿ.

**ಆದಿತ್ಯೈ**

ಆದಿತ್ಯರಾಗಿ ದೇವತೆಗಳೊಡನೆ ಇರುವವರಾದ್ದರಿಂದ ದೇವಗಣದಿಂದ ಕೂಡಿದ ಇಂದ್ರನು ರಕ್ಷಿಸುತ್ತಿರಲಿ.

**ಆಪ್ಲವಸ್ವ**

ಓ ಜೀವಿಗಳೇ, ನೀವು ಪರಂಪರೆಯಿಂದ ಮಾತು ಮಾತಿಗೂ ಹುಟ್ಟುತ್ತಾ ಸಾಯುತ್ತಾ ಈ ಬ್ರಹ್ಮಾಂಡದಲ್ಲಿ ತಿರುಗುತ್ತಿದ್ದೀರಿ. ನಿಮ್ಮ ಶರೀರಗಳು ಸುಖದಿಂದಿರುವಂತೆ ಅನ್ನಿಸುತ್ತಾ ನಿಮ್ಮ ತಂದೆ ತಾಯಿಗಳ ಸಂಗಮದಿಂದಾದದ್ದಾಗಿ ಮರಣ ರೂಪವಾದ ದುಃಖದಿಂದ ಕೂಡಿವೆ. ನಿಮ್ಮ ಶರೀರ ವ್ಯಾಮೋಹವು ದೂರಾಗಿ ವಿವೇಕ ಉಂಟಾಗಲಿ.

**ಮರೀಚಯ**

ಸ್ವಯಂಭು ಪುತ್ರ ಮರೀಚಿ ಮೊದಲಾದವರು ಸೃಷ್ಟಿ ಮಾಡುವವರಾಗಿ ಈ ಪ್ರಪಂಚವನ್ನು ಸೃಷ್ಟಿಸಿದರು. ಅಂತಹ ಮುನೀಶ್ವರರು ನಿಮ್ಮ ಶರೀರವು ಪರೋಪಕಾರಾರ್ಥವಾಗಿರುವಂತೆ ಮಾಡಲಿ. ನಿಮ್ಮ ಪ್ರಸಿದ್ಧಿಯು ಎಂದಿಗೂ ಹಾಳಾಗದಿರಲಿ.

**ಉತ್ತಿಷ್ಟತ**

ಓ ಋತ್ವಿಜರೇ, ಏಳಿ. ನಿದ್ದೆಯನ್ನು ದೂರ ಮಾಡಿ. ಅರುಣ ಕೇತುಕಾಗ್ನಿಯನ್ನು ಆರಾಧಿಸಿ, ಸೋಮವನ್ನು ಸೇವಿಸಿ. ಉತ್ಸಾಹಿಗಳಾಗಿ ಸೂರ್ಯ ಸದೃಶ ಕಾಂತಿಯನ್ನು ಪಡೆದವರಾಗಿ ಅರುಣಕೇತುಕಾಗ್ನಿಯನ್ನು ಆರಾಧಿಸಿರಿ.

**ಯುವಾ**

ನೀವು ಒಳ್ಳೆಯ ಶುಭ್ರವಸ್ತ್ರಗಳನ್ನು ಧರಿಸಿರಿ.

**ಅಷ್ಟಾಚಕ್ರಾ**

ಭೇದಿಸಲಶಕ್ಯವಾದ ದೇವತೆಗಳ ವಾಸಸ್ಥಾನವಾಗಿರುವ ಈ ಶರೀರವು ಎಂಟು ಚಕ್ರಗಳಿಂದ, ಒಂಭತ್ತು ಬಾಗಿಲುಗಳುಳ್ಳ ದೇವತೆಗಳ ಪಟ್ಟಣದಲ್ಲಿ ಸುವರ್ಣ ಸದೃಶವಾದ, ಸುಖಸ್ವರೂಪವಾದ ತೇಜಸ್ಸಿನಿಂದ ಕೂಡಿದ, ಕೇವಲ ಜ್ಞಾನದಿಂದ ಅರಿಯುವ ಕೋಶವಾಗಿದೆ.

### ಯೋವೈತಾಂ

ಯಾರು ಸಚ್ಚಿದಾನಂದ ಸ್ವರೂಪವಾದ ಈ ಶರೀರಸ್ಥಿತಿಯನ್ನು ಅರಿಯುತ್ತಾರೋ ಅಂತಹವರಿಗೆ ಸೃಷ್ಟಿಕರ್ತನಾದ ಬ್ರಹ್ಮನೂ ಪರಬ್ರಹ್ಮನೂ ದೀರ್ಘಾಯುಸ್ಸು ಕೀರ್ತಿಗಳನ್ನು ಕೊಡುತ್ತಾರೆ.

### ವಿಭ್ರಾಜಮಾನ

ಪಾಪಗಳನ್ನು ದೂರ ಮಾಡುವ, ಪ್ರಪಂಚ ನಿರ್ಮಾಣದ ಕೀರ್ತಿಯಿಂದ ವ್ಯಾಪಕವಾಗಿರುವ, ಹೆಚ್ಚಿನ ಪ್ರಕಾಶದಿಂದ ಸುವರ್ಣಮಯವಾದ ನಗರದಂತಿರುವ ಈ ಶರೀರದಲ್ಲಿ ಬ್ರಹ್ಮನು ಪ್ರವೇಶಿಸುತ್ತಾನೆ.

### ಪರಾಂಗೇ ತ್ಯಾಜ್ಯಾಮಯೀ

ಪರಬ್ರಹ್ಮನ ಯಥಾರ್ಥ ಸ್ವರೂಪವನ್ನರಿತವನು, ಆಯುಃಕ್ಷೀಣತೆ, ರೋಗ, ಅಪಮೃತ್ಯು ಮೊದಲಾದುವುಗಳಿಲ್ಲದವನಾಗಿ ಇಹಲೋಹ ಪರಲೋಕಗಳಲ್ಲಿನ ಸಮಸ್ತ ದೇವತೆಗಳ, ಸಮಸ್ತ ಜೀವಿಗಳ ಸ್ವರೂಪನಾಗಿ ಪುನರಾವೃತ್ತಿ ರಹಿತ ಪರಬ್ರಹ್ಮ ಚೈತನ್ಯವನ್ನು ಪಡೆಯುತ್ತಾನೆ.

### ಯತ್ಕುಮಾರಿ

ಅವಿವಾಹಿತಳಾದ ಸ್ತ್ರೀ ಅಕ್ರಮ ಪುರುಷ ಸಂಪರ್ಕದಿಂದ ಏನು ಸಂತೋಷ ಪಡೆಯುತ್ತಾಳೋ ವಯಸ್ಕ ಸ್ತ್ರೀ ಪರಪುರುಷ ಸಂಪರ್ಕದಿಂದ ಏನು ಸಂತೋಷ ಹೊಂದುತ್ತಾಳೋ, ಪತಿವ್ರತೆಯು ತನ್ನ ಪತಿಯೊಡನೆ ಸಂಯೋಗವಿಲ್ಲದೆ ಆತ್ಮಹತ್ಯೆ ಮಾಡಿಕೊಳ್ಳುವಂತಹ ಯಾವ ಪಾಪ ಮಾಡುತ್ತಾಳೋ ಮತ್ತು ಅದನ್ನೇ ಸಂತೋಷವೆಂದು ಭಾವಿಸುತ್ತಾಳೋ ಅಂತಹ ಎಲ್ಲ ಪಾಪಗಳನ್ನೂ ಅಗ್ನಿಹೋತ್ರವು (ಅರುಣಕೇತುವು) ಕ್ರಮವಾಗಿ ದೂರ ಮಾಡುತ್ತಾನೆ.

### ಅಶೃತಾ

ಪರಿಪಕ್ವ ಮನಸ್ಸುಳ್ಳವರಾಗಲೀ, ಪರಿಪಕ್ವ ಮನಸ್ಸಿಲ್ಲದವರಾಗಲೀ, ಯಜ್ಞವನ್ನು ಮಾಡಿದವರಾಗಲೀ ಯಜ್ಞವನ್ನು ಮಾಡಿಲ್ಲದವರಾಗಲೀ, ಅರುಣಕೇತುಕಾಗ್ನಿಯನ್ನು ತಿಳಿದವರು ಸ್ವರ್ಗವನ್ನು ಪಡೆದವರಾಗುತ್ತಾರೆ. ಅದನ್ನು ಹೊರತು ಮತ್ತೇನನ್ನು ಬಯಸರು.

### ಸಿಕತಾ

ಕಟ್ಟಿ ಹಾಕಲು ಹಗ್ಗಗಳು ಹೇಗೋ ಹಾಗೆ ಜೀವಿಗಳು ಸಂಸಾರದಲ್ಲಿ

ಕರ್ಮಬಂಧನಕ್ಕೊಳಗಾಗಿ ಗಾಳಿಗೆ ತೂರಿಹೋದ ಮರಳು ಅತ್ತಿತ್ತ ಗುಪ್ಪೆಗಳಾಗಿ ಬಿದ್ದಿರುವಂತೆಯೇ ಇಲ್ಲೂ ಪರಲೋಕದಲ್ಲು ಅಲ್ಲಲ್ಲಿ ಒಟ್ಟಾಗಿ ಇರುತ್ತಿದ್ದರು. ಅಂತಹ ಜೀವಿಗಳಲ್ಲಿ ಅರುಣಕೇತುವಿನ ಅನುಗ್ರಹವನ್ನು ಹೊಂದಿದವರಿಗೆ ಆ ಪರಮಾತ್ಮನು ಯಥಾರ್ಥವನ್ನು ತಿಳಿಸುವ ಮಂತ್ರಗಳಿಂದ ಜ್ಞಾನವನ್ನು ಕೊಡುತ್ತಾನೆ.

**ಅಪೇತ**

ಈ ಯಜ್ಞವನ್ನು ಮಾಡುವ ಪ್ರದೇಶದಲ್ಲಿ ಈ ಮೊದಲೂ ಆ ಮೇಲೂ ಇದ್ದಿರುವ ಯಮದೂತರುಗಳೇ, ನೀವೀ ಪ್ರದೇಶದಿಂದ ಚದುರಿ ದೂರಹೋಗಿರಿ. ಈ ಪ್ರದೇಶವು ಹಗಲಿರುಳೂ ವೇದ ಮಂತ್ರಗಳಿಂದ ತುಂಬಿ ಹೋಗಿದೆ. ಈ ಸ್ಥಳವನ್ನು ಯಮನೇ ಯಜಮಾನನಿಗೆ ಅನುಗ್ರಹಿಸಿದ್ದಾನೆ.

**ನೃಮಣಂತು**

ಇತರರನ್ನು ಪೀಡಿಸಿ ಜೀವನ ಹೊರೆಯುವವರು, ಇತರರಲ್ಲಿ ಜೀತ ಮಾಡಿಕೊಂಡು ಜೀವನ ಹೊರೆಯುವವರು ಅಂತಹವರ ಯಜಮಾನರು, ಹೀನ ಕುಲದಲ್ಲಿ ಜನಿಸಿದವರು, ಸತ್ಕುಲದಲ್ಲಿ ಜನಿಸಿದ ಕರ್ಮಾನರ್ಹರಾದ ಅಂಗವಿಕಲರು ಅವಿವಾಹಿತೆಯಲ್ಲಿ ಜನಿಸಿದವರು, ವ್ಯಭಿಚಾರದಿಂದ ಹುಟ್ಟಿದವರು, ಇಂತಹ ವರೆಲ್ಲರೂ ಈ ಯಜಮಾನನು ಮಾಡುವ ಯಜ್ಞ ಪ್ರದೇಶದಿಂದ ಎದ್ದು ದೂರ ಹೋಗಲಿ.

**ರೇತಃ ಪೀತಾ**

ಗರ್ಭದಲ್ಲಿದ್ದಾಗ ತಾಯಿ ತಂದೆಯರ ಸಮಾಗಮದ ವೇಳೆಯಲ್ಲಿ ರೇತಸ್ಸನ್ನು ಕುಡಿದವರೂ ಗರ್ಭವನ್ನು ಸುತ್ತುವರಿಯುವ ಗರ್ಭಾಂಬುವನ್ನು ಕುಡಿದವರೂ, ಶಾಸ್ತ್ರ ನಿಯಮಗಳನ್ನು ತೊರೆದು ಹೋಮಾದಿಗಳನ್ನು ಮಾಡಿದವರೂ, ದುರಾಚಾರಿ ಮಕ್ಕಳನ್ನೂ ಸೋದರ ಸಂಬಂಧಿಗಳನ್ನೂ, ಇಲ್ಲಿಂದ ಬೇರೆಡೆಗೆ ಕಳುಹಿಸಿ ಕೊಡುತ್ತೇನೆ ಮತ್ತು ಅಂತ್ಯಕಾಲದಲ್ಲಿ ಅವರು ಸದ್ಗತಿ ದೊರೆಯದೆ ನರಕಕ್ಕೆ ಹೋಗಲು ಯಮನ ಬಳಿಗೆ ಕಳಿಸುತ್ತೇನೆ.

**ಶತಮಿನ್ನು**

ಓ ದೇವತೆಗಳೇ, ನೂರು ವರ್ಷ ಆಯಸ್ಸನ್ನು ನಮಗೆ ಕೊಟ್ಟಿದ್ದರೂ, ವೃದ್ಧಾಪ್ಯದಲ್ಲಿ ಪೋಷಿಸುವ ಸಾಮರ್ಥ್ಯವುಳ್ಳ ಮಕ್ಕಳು ಇಲ್ಲದೇ ಅರ್ಧಾಯುಗಳೆಂದೇ (ನಮ್ಮನ್ನು) ಎಣಿಸುತ್ತಾರೆ. ವೃದ್ಧಾಪ್ಯದಲ್ಲಿ ನಮ್ಮನ್ನು ಪೋಷಿಸಲು ಸಮರ್ಥರಾದ ಮೇಲೆ ನಾವು ವೃದ್ಧಾಪ್ಯದಿಂದಿದ್ದರೂ ಪೂರ್ಣಾಯುಗಳೆಂದು ಭಾವಿಸುತ್ತೇವೆ. ಆದ್ದರಿಂದ ನಮ್ಮ ಮಕ್ಕಳು ನಮ್ಮನ್ನು ಪೋಷಿಸಲು ಸಮರ್ಥರಾಗುವವರೆಗೆ ಮಧ್ಯದಲ್ಲಿ ನಮ್ಮ ಆಯುರ್ದಾಯಕ್ಕೆ ಅಡ್ಡಿ ತರಬೇಡಿ.

**ಅದೋ ಯದ್**

ಜಗತ್ಕಾರಣನಾದ ಪರಬ್ರಹ್ಮನೇ ಪಿತೃದೇವತೆಗಳಿಗೂ, ಯಮನಿಗೂ, ಅಶ್ವಿನಿ ದೇವತೆಗಳಿಗೂ, ಅಗ್ನಿಗೂ, ವಾಯುವಿಗೂ, ಅಂತರಿಕ್ಷದಲ್ಲಿ ಸಂಚರಿಸುವ ಯಕ್ಷ ಗಂಧರ್ವರೇ ಮೊದಲಾದವರಿಗೂ ಆಧಾರವಾಗಿ ಹಿಡಿದುಕೊಳ್ಳಲು ಕೊಂಬೆಯಂತಿರುತ್ತಾನೆ.

**ಕಾಮಪ್ರ**

ಸರ್ವಕಾಲದಲ್ಲೂ ಇರುವ ಪರಬ್ರಹ್ಮನೇ, ನಾನಾಗಿರುವುದರಿಂದ ಎಲ್ಲ ಕೋರಿಕೆಗಳನ್ನು ಪಡೆದವನಾಗಿರುತ್ತೇನೆ. ಈ ರೀತಿ ದುಃಖ ನಿವೃತ್ತಿಯನ್ನು ಮಾಡುವ ಬ್ರಹ್ಮಸಂಬಂಧವಾದ ಮಾತುಗಳನ್ನು ಕೇಳಿಯೇ ಬಂಗಾರವೇ ಮೊದಲಾದ ಐಶ್ವರ್ಯವನ್ನೂ ಪ್ರೀತಿ ಪಾತ್ರರಾದ ಪತ್ನಿಪುತ್ರರನ್ನೂ ಪಡೆದವನಾದೆನು. ಓ ಜಲಾಧಿದೇವತೆಗಳೇ, ನೀವು ಈ ಯಜ್ಞ ಕಾರ್ಯದಲ್ಲಿ ಪೂಜಿಸಲ್ಪಟ್ಟು ಸುಪ್ರೀತನಾಗಿ ಯಜಮಾನನಿಗೆ ಪುತ್ರಪ್ರಾಪ್ತಿಯಾಗುವಂತೆ ಅನುಗ್ರಹಿಸಿ.

**ವಿಶೀರ್ಷ್ಣೀಂ**

ತಲೆ ಇಲ್ಲದ, ಹದ್ದಿನ ತಲೆಯುಳ್ಳ, ರಾಕ್ಷಸ ಸ್ವಭಾವದ ಅಮಂಗಳಕರವಾದವುಗಳನ್ನು ಇಲ್ಲಿಂದ ದೂರ ಮಾಡಿರಿ. ಅಲ್ಲದೆ ಪರಿಬಾಧ, ಶ್ವೇತಕುಕ್ಷಿ, ನಿಜಂಘ ಎಂಬ ಹೆಸರಿನ ಅಲಕ್ಷ್ಮಿಯ ಅನುಚರರನ್ನು ಇಲ್ಲಿಂದ ದೂರಮಾಡಿರಿ.

**ಸತಾನ್ವಾಚ್ಯಾ**

ಓ ಅರುಣಕೇತುವೆ, ನಮ್ಮನ್ನು ಪೀಡಿಸುವ ಉದ್ದೇಶವಿರುವ ಪರಿಬಾಧಾದಿಗಳನ್ನು ಅದರ ತಾಯಿಯನ್ನೂ ಅಮಂಗಳೆಯನ್ನೂ ನಾಶಪಡಿಸು. ಅಲ್ಲದೆ ಈರ್ಷ್ಯೆ, ಅಸೂಯೆ, ಹಸಿವು, ಕೋಪ, ದುರ್ವರ್ತನೆ ಎಂಬುವುಗಳನ್ನು ವೃದ್ಧಿಯಾಗದ ಹಾಗೆ ಶುಕ ಪಕ್ಷಿಗಳು ಹಾರಿಹೋಗುವ ತೆರದಲ್ಲಿ ಹಾರಿಹೋಗುವಂತೆ ಮಾಡು.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತೆಂಟನೆಯ ಅನುವಾಕವು ಮುಗಿಯಿತು.

॥ ಅಥ ಏಕೋನ ತ್ರಿಂಶೋನುವಾಕಃ ॥

**ಪರ್ಜನ್ಯಾಯ**

ಓ ಋತ್ವಿಕರೇ, ಸ್ವರ್ಗದಲ್ಲಿದ್ದು ಭೂಮಿಯು ಮಳೆಯಿಂದ ನೆನೆಯುವಂತೆ ಮಾಡುವ ಮೇಘ(ಮೋಡ)ವನ್ನು ಪ್ರಾರ್ಥಿಸಿರಿ. ಆ ಮೇಘವು ನಮಗೆ ಯವ (ಉತ್ತಮವಾದ ಗೋಧಿ)ಯಂತಹ ಆಹಾರವು ದೊರಕುವಂತೆ ಮಾಡಲಿ.

**ಇದಂ ವಚಃ**

ಓ ಋತ್ವಿಕರೇ, ಸ್ವಯಂ ಪ್ರಕಾಶವಾದ ಮೇಘದ ಕುರಿತು ನಾವು ಮಾಡಿದ ಪ್ರಾರ್ಥನೆಯು ಮೇಘದ ಹೃದಯದಲ್ಲಿ ಉಳಿಯುವ ಹಾಗೆ ಪ್ರವೇಶಿಸುವಂತೆ ಮಾಡಿ. ನಮ್ಮ ಬಗ್ಗೆ ವಾಯುವು ಮಾನವರೆಲ್ಲರೂ ಧಾನ್ಯವೇ ಮೊದಲಾದ ಫಲಗಳನ್ನು ಕೊಡುವ, ಹವಿಸ್ಸಿನಿಂದ ದೇವತೆಗಳನ್ನೂ ಪೋಷಿಸುವಂತಹ ಔಷಧಿ ವನಸ್ಪತಿಗಳನ್ನು ಸೌಖ್ಯವನ್ನೂ ದೊರಕಿಸುವಂತೆ ಮಾಡಿ.

**ಯೋ ಗರ್ಭ**

ಧಾನ್ಯಗಳನ್ನು ಕೊಡುವ ಸಸ್ಯಗಳಿಗೆ, ಗೋವುಗಳಿಗೆ, ಕುದುರೆಗಳಿಗೆ ಮನುಷ್ಯ ಸ್ತ್ರೀಯರಿಗೆ ಗರ್ಭ ಉಂಟಾಗುವಂತೆ ಮಾಡುವ ಮೇಘವು ನಮಗೆ ಸೌಖ್ಯವನ್ನು ತರಲಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಇಪ್ಪತ್ತೊಂಭತ್ತನೆಯ ಅನುವಾಕವು ಮುಗಿಯಿತು.

॥ ಅಥ ತ್ರಿಂಶೋನುವಾಕಃ ॥

**ಪುನರ್ಮಾ**

ನಮ್ಮ ಇಂದ್ರಿಯಗಳು, ಆಯುರ್ದಾಯ, ಸೌಭಾಗ್ಯ, ಬ್ರಹ್ಮವರ್ಚಸ್ಸು, ಐಶ್ವರ್ಯವೇ ಮೊದಲಾದುವುಗಳು ಎಲ್ಲವೂ ನಮ್ಮಲ್ಲಿ ವೃದ್ಧಿ ಹೊಂದಲಿ.

**ಯನ್ಮೇದ್ಯ**

ಪ್ರಮಾದವಶಾತ್ ನನ್ನ ರೇತಸ್ಸು ವ್ಯರ್ಥವಾಗಿ ಭೂಮಿಯಲ್ಲಾಗಲೀ, ವನಸ್ಪತಿ ಸಸ್ಯಗಳಲ್ಲಾಗಲೀ, ನೀರಿನಲ್ಲಾಗಲೀ, ಸೇರುವುದರಿಂದ ಅನಾರೋಗ್ಯವುಂಟಾಗುವುದರಿಂದ ಅಂತಹ ಆಚರಣೆಯನ್ನು ನಿಲ್ಲಿಸಿ, ದೀರ್ಘಾಯಸ್ಸು ವರ್ಚಸ್ಸು ಹೊಂದುವಂತಾಗಲಿ.

**ಯನ್ಮೇರೇತಃ**

ಓ ಮೇಘವೇ, ನನ್ನ ವೀರ್ಯವು ಪತ್ನಿಯ ಗರ್ಭದಲ್ಲಿ ಸೇರಿ ಸಂತಾನ ರೂಪದಲ್ಲಿ ಹೊರಬಂದು ನನ್ನನ್ನು ಸುಖಿಯನ್ನಾಗಿಸುವ ಉತ್ತಮ ಪುತ್ರರುಳ್ಳವನನ್ನಾಗಿ ಮಾಡು.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಮೂವತ್ತನೆಯ ಅನುವಾಕವು ಮುಗಿಯಿತು.

|| ಅಥ ಏಕ ತ್ರಿಂಶೋನುವಾಕಃ ||

**ಅದ್ಭ್ಯಸ್ತಿರೋ**

ಓ ಕುಬೇರನೇ, ವಿಶ್ರವಸನ ಮಗನಾದ ವೈಶ್ರವಣನು ನಿನ್ನ ಅಭೀಷ್ಟ ಕರ್ಮಗಳನ್ನು ನಾಶಪಡಿಸುತ್ತಿದ್ದಾನೆ. ಆ ವೈಶ್ರವಣನ ಮುಖಾಂತರ ನಮ್ಮ ಸಂಬಂಧವಾದ ಎಲ್ಲ ಶತ್ರುಗಳನ್ನು ಅಂದರೆ ನಮ್ಮ ಅಭೀಷ್ಟ ಕರ್ಮಗಳನ್ನು ನಾಶಪಡಿಸುವವರನ್ನು ನಾಶಪಡಿಸುವಂತೆ ಮಾಡು.

**ತ್ವಾಶ್ಟ್ರೀಂ**

ಓ ಕುಬೇರನೇ, ವೈಶ್ರವಣನೊಡಗೂಡಿ ಹೆಚ್ಚಿನ ಭಾರವನ್ನು ತಾಳುವ ಅನೇಕ ಚಕ್ರಗಳುಳ್ಳ ಸಹಸ್ರಾರು ಕುದುರೆ ರಥವನ್ನೇರಿ ನಾವು ಮಾಡುವ ಪೂಜಾಸ್ಥಳಕ್ಕೆ ಬಾ.

**ಯಸ್ಮೈ**

ಸಮಸ್ತ ಭೂತಾದಿಗಳಿಂದ ಐಶ್ವರ್ಯ, ಪಶುಗಳು, ಕುದುರೆಗಳು, ಆನೆಗಳು ಮೊದಲಾದ ಕಾಣಿಕೆಗಳನ್ನು ಅರ್ಪಿಸಿ ಯಾವ ಕುಬೇರನನ್ನು ಪೂಜಿಸುತ್ತಾರೋ ಅಂತಹ ಯಜ್ಞೀಯ (ಪೂಜಾ) ದ್ರವ್ಯಗಳಿಂದ ಪೂಜಿಸಲ್ಪಡುತ್ತಿರುವ, ಅತ್ಯಂತ ಪ್ರಕಾಶವುಳ್ಳವನಾಗಿ ಸಂಪತ್ತುಳ್ಳವನಾಗಿ ಪೂಜಿಸಲ್ಪಡುತ್ತಿರುವ ಕುಬೇರನ ಅನುಗ್ರಹದಿಂದ ಹಸ್ತ್ಯಶ್ವಾದಿ ಸಂಪತ್ತನ್ನು ಪಡೆದವರಾಗೋಣ.

**ಸುದರ್ಶನೇ**

ಓ ಕುಬೇರನೇ, ಸುದರ್ಶನ, ಕ್ರೌಂಚ, ಮೈನಾಕ ಎಂಬ ಹೆಸರುಳ್ಳ ಮೂರು ಮಹಾಪರ್ವತಗಳಲ್ಲಿ ನೂರು ಬಾಗಿಲುಗಳು, ನೂರು ಪ್ರಾಕಾರ (ಸುತ್ತು)ಗಳೂ, ನೂರು ಬೀದಿಗಳುಳ್ಳ ನಿನ್ನ ಪಟ್ಟಣದಿಂದ ನಮ್ಮನ್ನು ಅನುಗ್ರಹಿಸಲು ಬಾ.

**ಇತಿ ಮಂತ್ರಾ**

ಈ ರೀತಿಯಾಗಿ ಮಂತ್ರಗಳು ಹೇಳಲ್ಪಟ್ಟವು. ಇನ್ನು ಮುಂದೆ ಅನುಷ್ಠಾನ ಪರವಾದ ಬ್ರಾಹ್ಮಣ ಭಾಗವನ್ನು ಹೇಳಲ್ಪಡುತ್ತವೆ.

**ಯದಿ .... ಹಿರಣ್ಯ ... ಅಥ ಬಲಿಗ್ಂ ....**

ವೈಶ್ರವಣನಿಗೋಸ್ಕರ ಬಲಿಯನ್ನು ಕೊಡುವಾಗ, ಹೊಕ್ಕಳಿನಲ್ಲಿ ಬಂಗಾರವನ್ನು ಹೊಂದಿರುವವನೂ, ಬಂಗಾರವನ್ನು ದುರ್ಲಭವನ್ನಾಗಿ ಮಾಡಿ ಮಾನವರನ್ನು ಹಿಂಸಿಸುವವನೂ, ಸಮಸ್ತ ಭೂತಗಳಿಗೆ ಅಧಿಪತಿಯಾಗಿಯೂ ಇರುವ ಕುಬೇರನ

ಸಂಬಂಧಿಯಾಗಿರುವ ವೈಶ್ರವಣನಿಗೆ ನಮಸ್ಕರಿಸುತ್ತಿದ್ದೇನೆ. ಈ ಬಲಿಯನ್ನು ವೈಶ್ರವಣನು ಪಡೆದುಕೊಳ್ಳಲಿ ಎಂದು ವೈಶ್ರವಣನಿಗೆ ಒಪ್ಪಿಸಿದ ನಂತರ ನಿಂತು ಪ್ರಾರ್ಥಿಸಿಕೊಳ್ಳಬೇಕು.

**ಕ್ಷತ್ರಂ ಕ್ಷತ್ರಂ**

ವೈಶ್ರವಣನು ಪರಿಪಾಲಿಸುವ ಕ್ಷತ್ರಿಯ ವಂಶದಲ್ಲಿ ಜನಿಸಿದವನು. ನಾವು ಬ್ರಾಹ್ಮಣ ವಂಶದಲ್ಲಿ ಹುಟ್ಟಿದವರು. ಓ ವೈಶ್ರವಣನೇ, ನೀನು ಪಾಲಿಸುವವನಾದ್ದರಿಂದ ನಾವು ಬ್ರಾಹ್ಮಣರಾದರೂ ನಿನಗೆ ನಮಸ್ಕರಿಸುತ್ತೇವೆ. ನಮ್ಮನ್ನು ಹಿಂಸಿಸಬೇಡ. ಈ ಪೂಜಾಸ್ಥಳಕ್ಕೆ ಬಂದು ನಾವು ನಿನಗಾಗಿ ಕೊಡುತ್ತಿರುವ ಬಲಿಯನ್ನು ಸ್ವೀಕರಿಸು.

**ಅಥತಮಗ್ನಿ**

ಹಿಂದೆ ಹೇಳಿದ ಉಪಸ್ಥಾನಾನಂತರದ, ವೈಶ್ರವಣ ಬಲಿಯನ್ನಿಟ್ಟ ನಂತರ ಅಗ್ನಿಹೋತ್ರವನ್ನು ಭೂಮಿಯಲ್ಲಿ ಸ್ಥಾಪಿಸಬೇಕು.

**ತಿರೋಧಾ**

ಓ ಅಗ್ನಿಹೋತ್ರವೇ, ನೀನು ನಿನ್ನ ತೇಜಸ್ಸಿನಿಂದ ಭೂಲೋಕ, ಭುವರ್ಲೋಕ, ಸುವರ್ಲೋಕಗಳನ್ನು ಪ್ರತ್ಯೇಕವಾಗಿಯೂ, ಒಟ್ಟಾಗಿಯೂ ಆವರಿಸು. ಅಂದರೆ ಈ ಸಮಸ್ತ ಲೋಕಗಳನ್ನೂ ಪರಿಪಾಲಿಸುವವನಾಗು ಎಂದು ಅರ್ಥ ಕೊಡುವ ಮಂತ್ರದಿಂದ ಅಗ್ನಿಸ್ಥಾಪನೆಯನ್ನು ಮಾಡಬೇಕು.

**ಯಸ್ಮಿನ್ನಸ್ಯ**

ವೈಶ್ರವಣ ಯಜ್ಞ ಮಾಡುವ ಕಾಲವನ್ನು ಹೇಳುತ್ತಿದ್ದಾನೆ. ಅರುಣ ಕೇತುಕ ಸಂಬಂಧವಾದ ಬ್ರಾಹ್ಮಣ ಭಾಗದಲ್ಲಿ ಹೇಳಿರುವ ಎಲ್ಲ ಆಹುತಿಗಳು ಯಾವ ಕಾಲದಲ್ಲಿ ಕೊಡಲಾಗುತ್ತವೋ ಆ ಕಾಲದಲ್ಲಿಯಾಗಲೀ ಮನುಷ್ಯನು ನಿದ್ರಿಸುವ ಕಾಲದಲ್ಲಾಗಲೀ ವೈಶ್ರವಣ ಯಜ್ಞವನ್ನು ಮಾಡಬೇಕು.

**ಮಾಸ್ಮಪ್ರ**

ವೇದಾಧ್ಯಯನದ ನಿಯಮಗಳನ್ನು ಹೇಳುತ್ತಿದ್ದಾನೆ. ದುರ್ಮಾರ್ಗ ಪ್ರವರ್ತನವುಳ್ಳವರಿಗೆ ವೇದಾಧ್ಯಯನ ಮಾಡಿಸಬಾರದು. ಈ ರೀತಿ ಯಾರು ತಿಳಿಯುತ್ತಾರೋ ಅವರಿಗೆ ಎಲ್ಲ ಕಾರ್ಯಗಳೂ ಸಿದ್ಧಿಸುತ್ತವೆ. ವೈಶ್ರವಣ ಬಲಿ ಸಂಬಂಧವಾದ ಕಾರ್ಯಗಳನ್ನು ಗುರುವಿನಿಂದ ತಿಳಿಯದೇ ಮಾಡುವವರು ತಿನ್ನಲು ಆಹಾರವಿಲ್ಲದ ಹಸಿವಿನಿಂದ ಪೀಡಿತರಾಗುತ್ತಾರೆ. ಯಾವುದೇ ಕಾರ್ಯವು ಸಿದ್ಧಿಸುವುದಿಲ್ಲ.

**ಯಸ್ತೇ ವಿ**

ಓ ಕುಬೇರನೇ, ಎಲ್ಲ ವಿಧವಾದ ಹಿರಣ್ಯವೇ ಮೊದಲಾದ ಲಾಭಗಳನ್ನು ಹಾಳು ಮಾಡುವಂತಹ ನಿನ್ನ ಸಹೋದರನಾದ ವೈಶ್ರವಣನು ನನ್ನ ಮನಸ್ಸಿನಲ್ಲಿ ನೆಲೆಸಿ ಬಿಟ್ಟಿದ್ದಾನೆ. ಆದ್ದರಿಂದ ಅವನಿಗಾಗಿ ಶ್ರೇಷ್ಠವಾದ ಈ ಬಲಿ ಪಿಂಡವನ್ನು ಕೊಡುತ್ತಿದ್ದೇನೆ. ವೈಶ್ರವಣನು ಇದನ್ನು ಸ್ವೀಕರಿಸಿ ನನ್ನ ಸಂಬಂಧವಾದ ಹಿರಣ್ಯವೇ ಮೊದಲಾದ ಎಲ್ಲ ಸಂಪತ್ತನ್ನೂ ನನಗೆ ದೊರಕಿಸಿ ಕೊಡಲಿ ಎಂದು ವೈಶ್ರವಣನಿಗೆ ಬಲಿಯನ್ನು ಕೊಡುತ್ತಿದ್ದೇನೆ.

**ರಾಜಾಧಿ**

ರಾಜರುಗಳಿಗೆ ರಾಜನಾದ ಎಲ್ಲ ವಿಧವಾದ ಐಶ್ವರ್ಯವನ್ನು ಬಲಾತ್ಕಾರವಾಗಿ ಅಪಹರಿಸುವ ವೈಶ್ರವಣನಿಗೆ ನಾವು ನಮಸ್ಕರಿಸುತ್ತೇವೆ. ಕೋರಿಕೆಗಳಿಗೆ ಅಧಿಪತಿಯಾದ ವೈಶ್ರವಣನು ಕೋರಿಕೆಗಳನ್ನು ಅಪೇಕ್ಷಿಸುವ ನಮಗೆ ನಾವು ಅಪೇಕ್ಷಿಸಿದುದದನ್ನು ಕೊಡಲಿ. ಕುಬೇರನ ಸಹೋದರನಾದ ಆ ವೈಶ್ರವಣನಿಗೆ ಮತ್ತೆ ನಮಸ್ಕರಿಸುತ್ತಿದ್ದೇವೆ.

**ಕೇತವೋ**

ಕೇತು, ಅರುಣ, ವಾತರಶನ ಎಂಬ ಹೆಸರಿನ ಮುನೀಶ್ವರರು ಸ್ವಸ್ಥಚಿತ್ತರಾಗಿ ಯಜ್ಞದಲ್ಲಿ ಸ್ಥಿರವಾದ ಅನೇಕ ವಿಧವಾದ ಫಲವನ್ನು ಕೊಡುವ ಇಷ್ಟದೇವತೆಯು ಪ್ರಸನ್ನವಾಗುವಂತೆ ಮಾಡಲಿ.

**ಶಿವಾನ**

ಸ್ವರ್ಗದಲ್ಲಿನ ಜಲ ಅಂದರೆ ವಸಂತ ಕಾಲದಲ್ಲಿ ಬರುವ ಮಳೆಯು ನಮಗೆ ಔಷಧಿಗಳನ್ನು ಸೌಖ್ಯವನ್ನೂ ಮಂಗಳವನ್ನುಂಟು ಮಾಡಲಿ. ಸರೋವರಗಳಿಂದ ಕೂಡಿದ ಭೂಮಿಯು ಕೊರತೆಯಿಲ್ಲದಂತೆ ಸುಖ ಕೊಡಲಿ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಮೂವತ್ತೊಂದನೆಯ ಅನುವಾಕವು ಮುಗಿಯಿತು.

॥ ಅಥ ದ್ವಾತ್ರಿಂಶೋಽನುವಾಕಃ ॥

**ಸಂವತ್ಸರ**

ಅರುಣ ಕೇತುಕಾಗ್ನಿ ಸಂಬಂಧವಾದ ಯಜ್ಞವನ್ನಾಚರಿಸುವವರು ಮೊದಲು ಒಂದು ಸಂವತ್ಸರದ ಕಾಲ ಅಥವಾ ಎರಡು ಮಾಸಗಳಾದರೂ ಮುಂದೆ ಹೇಳುವ ನಿಯಮಗಳನ್ನು ಅನುಸರಿಸಬೇಕು.

**ನಿಯಮಃ**

ಈ ವ್ರತವನ್ನು ಮಾಡುವ ಮುಖ್ಯ ವಿಧಾನವನ್ನು ಸಂಕ್ಷೇಪವಾಗಿ ತಿಳಿಸುತ್ತಿದ್ದಾರೆ.

**ತಸ್ಮಿನ್ನಿಯಮ**

ಆ ವ್ರತದಲ್ಲಿ ಮಾಡಬೇಕಾದ ಮುಖ್ಯ ನಿಯಮಗಳೇನೆಂದರೆ ಪ್ರಾತಸ್ಸವನ, ಮಧ್ಯಾಹ್ನ ಸವನ, ಸಾಯಂಸವನ ಮಾಡುವ ಸಮಯದಲ್ಲಿ ಮೂರು ಕಾಲವೂ ಸ್ನಾನ ಮಾಡಬೇಕು. ನಾಲ್ಕನೆಯ ಕಾಲದಲ್ಲಿ ಊಟ ಮಾಡಬೇಕು. (ಅಂದರೆ ಹಗಲು ರಾತ್ರಿ ಎರಡು ಹೊತ್ತಾಯಿತು. ಸಾಮಾನ್ಯವಾಗಿ ಊಟ ಮಾಡುವ ಸಮಯಕ್ಕೆ ನಾಲ್ಕನೆಯ ಸಮಯದಲ್ಲಿ ಊಟ ಮಾಡಬೇಕು. ಇಂದು ಮಧ್ಯಾಹ್ನ ಊಟ ಮಾಡಿದರೆ ಆ ರಾತ್ರಿ ಮರುದಿವಸ ಮಧ್ಯಾಹ್ನ ಬಿಟ್ಟು ರಾತ್ರಿ ಹಾಲು ಅಥವಾ ಅನ್ನ ಊಟ ಮಾಡಬೇಕು. ಹೀಗೆ ಮಾಡಲು ಅಶಕ್ತರಾದವರು ನಿತ್ಯ ಊಟ ಮಾಡಬಹುದು) ''ಪುನರ್ಮಾಮೈತ್ವಿಂದ್ರಿಯಂ'' ಎಂಬ ಮಂತ್ರ ಉಚ್ಚರಿಸುತ್ತಾ ಔದುಂಬರ (ಅತ್ತಿ) ಸಮಿತ್ತಿನಿಂದ ಹೋಮ ಮಾಡಬೇಕು.

**ಉದ್ಧೃತ ಪರಿಪೂತಾಭಿರದ್ಭಿಕಾರ್ಯ**

ನದಿ, ಕೆರೆ ಮೊದಲಾದುವುಗಳಿಂದ ಕೊಡದಲ್ಲಿ ತಂದ ನೀರನ್ನು ಶೋಧಿಸಿ ಕಾಲು ತೊಳೆಯುವುದು, ಆಚಮನ ಮಾಡುವುದು ಮೊದಲಾದುವುಗಳನ್ನು ಮಾಡಬೇಕು. ಭಿಕ್ಷೆ ಆಚರಿಸದೆ ಬೇರೆಯವರಿಂದ ತರಿಸಿಕೊಂಡ ಆಹಾರವನ್ನು ಸೇವಿಸಬಾರದು.

**ಅಗ್ನಯೇ ವಾಯವೇ**

ಅಗ್ನಿ, ವಾಯು, ಸೂರ್ಯ, ಬ್ರಹ್ಮ, ಪ್ರಜಾಪತಿ, ಚಂದ್ರ, ನಕ್ಷತ್ರಗಳು, ಋತುಗಳು, ಪ್ರಭವಾದಿ ಸಂವತ್ಸರಗಳಲ್ಲಿ ತತ್ಕಾಲ ಸಂವತ್ಸರ ಮತ್ತು ವರುಣ ಹೀಗೆ ಮೂಲ ಮಂತ್ರಗಳನ್ನುಚ್ಚರಿಸಿ ಸ್ವಾಹಾಕಾರವನ್ನು ಹೇಳಿ ಹೋಮ ಮಾಡಬೇಕು.

**ಪ್ರವರ್ಗ್ಯವದಾದೇಶಃ**

ಪ್ರವರ್ಗ್ಯಾಧ್ಯಯನಗಳಲ್ಲಿ ತಿಳಿಸಿರುವಂತೆ ಇಲ್ಲಿ ಆಚರಿಸಬೇಕು. ಆರಣ್ಯಕ ಕಾಂಡಗಳಲ್ಲಿ ತಿಳಿಸಿರುವಂತೆ ಅರುಣರನ್ನು ಮುನೀಶ್ವರರನ್ನೂ ಉದ್ದೇಶಿಸಿ ಹೋಮ ಮಾಡಬೇಕು.

**ಮಹಾನಾಮ್ನೀ**

''ಆಪಮಾಪಾಮಪಸ್ಸರ್ವಾಃ'', ''ಮಹಾನಾಮ್ನೀರ್ಮಹಾಮಾನಾಃ'' ಎಂಬ ಮಂತ್ರಗಳಿಂದ ಬ್ರಹ್ಮಚಾರಿಯಿಂದ ಆ ಜಲವನ್ನು ಸ್ಪರ್ಶಿಸುವಂತೆ ಮಾಡಿ ''ಸುಮೃಡೀಕಾ

ಸರಸ್ವತೀ'' ಎಂಬ ಮಂತ್ರದಿಂದ ಭೂಮಿಯನ್ನು ಸ್ಪರ್ಶಿಸುವಂತೆ ಮಾಡಿ ನಂತರ ಆಚಾರ್ಯನು ಬ್ರಹ್ಮಚಾರಿಯನ್ನು ಅರಣ್ಯಕಾಂಡದ ಅಧ್ಯಯನಕ್ಕೆ ನಿಯಮಿಸಬೇಕು.

**ಏವಮಪ**

ಈ ಪ್ರಕಾರವಾಗಿ ಅಧ್ಯಯನ ಮಾಡಿದ ನಂತರ ಪ್ರಾರಂಭದಲ್ಲಿ ಹೇಗೆ ಶಾಂತಿ ಮಂತ್ರಗಳ ಪಠನ ಮಾಡಿದರೋ ಹಾಗೆ ಈಗಲೂ ಪಠನ ಮಾಡಬೇಕು. ಹಸುವೊಂದನ್ನು ದಾನವಾಗಿ ಕೊಡಬೇಕು. ಹಸು ನೀರು ಕುಡಿಯುವುದಕ್ಕೆ ಒಂದು ಕಂಚಿನ ಪಾತ್ರೆ, ಉಡಲು ರೇಷ್ಮೆಯ ವಸ್ತ್ರ ಅಥವಾ ಹತ್ತಿಯ ವಸ್ತ್ರವನ್ನು ಯಥಾಶಕ್ತಿ ಆಚಾರ್ಯನಿಗೆ ದಕ್ಷಿಣೆ ರೂಪದಲ್ಲಿ ಕೊಡಬೇಕು.

**ಏವಗ್ಂ**

ಈ ಪ್ರಕಾರ ವೇದಗಳಲ್ಲಿ ತಿಳಿಸಲಾದ ಶಾಂತಿ ನಿಯಮಗಳ ಪ್ರಕಾರ ಈ ಅರಣ್ಯಕ ಭಾಗವನ್ನು ಅರಣ್ಯದಲ್ಲಿ ಅಧ್ಯಯನ ಮಾಡಬೇಕು. ಅರಣ್ಯದಲ್ಲಿ ಹೇಳುವಂತಹ ವಾದ್ದರಿಂದ ಅರುಣ ಮೊದಲಾದ ಕೆಲವು ಅಧ್ಯಾಯಗಳನ್ನು ಅರಣ್ಯಕವೆಂದು ಕರೆಯುತ್ತಾರೆ. ಈ ರೀತಿ ನಿಯಮಾನುಸಾರ ಅಧ್ಯಯನ ಮಾಡುವ ತಪಸ್ವಿಯು ಪುಣ್ಯಶಾಲಿಯಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ ಎಂದು ನಿಶ್ಚಯವಾಗಿ ತಿಳಿಸುತ್ತ ಮಂಗಳಾರ್ಥವಾಗಿ ಎರಡು ಬಾರಿ ಒತ್ತಿ ಹೇಳಲಾಗಿದೆ.

ಇಲ್ಲಿಗೆ ತೈತ್ತಿರೀಯಾರಣ್ಯಕದ ಮೊದಲ ಪ್ರಪಾಠಕದ ಮೂವತ್ತೆರಡನೆಯ ಅನುವಾಕವು ಮುಗಿಯಿತು.

**ಓಂ ಭದ್ರಂ ಕರ್ಣೇಭಿಃ....ಓಂ ಶಾಂತಿ ಶಾಂತಿ ಶಾಂತಿ**

ಈ ಶಾಂತಿ ಮಂತ್ರಕ್ಕೆ ಪ್ರಾರಂಭದಲ್ಲಿರುವಂತೆ ಅರ್ಥೈಸಬೆಕು.

**ಓಂ ಶಾಂತಿರಸ್ತು**

# ಅನುಬಂಧ

ಅಂತರ್ಬಾಹ್ಯವರ್ತಿಗಳಾದ ಪ್ರಾಣ ಸಮುದ್ರ ಪರ್ವತಾದಿ ರೂಪ ಅಚೇತನಗಳ ಸೃಷ್ಟಿಯನ್ನು ವಿವರಿಸಿ ಚೇತನ ಸ್ವರೂಪಗಳ ಸೃಷ್ಟಿಯ ವಿಷಯದಲ್ಲಿ ಪರಮೇಶ್ವರನ ಸರ್ವೋತ್ಕೃಷ್ಟತೆಯನ್ನು ಈ ಮಂತ್ರದಿಂದ ವಿವರಿಸಲ್ಪಡುವುದು.

ब्रह्मा देवानां पदवी: कवीनाम् ऋषि:विप्राणां महिषो मृगाणाम् ।
श्येनो घृघ्राणाँ स्वधितिर्वनानां सोम: पवित्रम् अत्येति रेभन् ॥

ಇಂದ್ರಾದಿ ದೇವತೆಗಳ ಮಧ್ಯದಲ್ಲಿ ಚತುರ್ಮುಖ ಬ್ರಹ್ಮನು ನಿಯಾಮಕನಾಗಿ ಸರ್ವೋತ್ಕರ್ಷನಾಗಿರುವನು. ಹಾಗೆಯೇ ಕಾವ್ಯ ನಾಟಕಾದಿ ಕರ್ತೃಗಳಲ್ಲಿ ಪದವಿಯ (ಗೌರವಾರ್ಹ) ಸ್ಥಾನದಲ್ಲಿ(ಸ್ವರೂಪದಲ್ಲಿ) ಗುರುತಿಸಲ್ಪಡುವನಾಗಿ ಇರುವನು. ಈ ಪದವಿ ಎಂಬುದು ''एक: शब्द सम्यक्ज्ञात: सुप्रयुक्त: स्वर्गेलोके कामधुक् भवति'' ಶಬ್ದವು ಚೆನ್ನಾಗಿ ತಿಳಿಯಲ್ಪಟ್ಟು ಯೋಗ್ಯ ರೀತಿಯಲ್ಲಿ ಉಪಯೋಗಿಸಲ್ಪಟ್ಟಲ್ಲಿ ಸ್ವರ್ಗಲೋಕದಲ್ಲಿ ಇಷ್ಟಾರ್ಥ ಸಿದ್ಧಿಯಾಗುವುದೆಂದು ತಿಳಿಸಿದಂತೆ ಅಂತಹ (ಶಬ್ದ ಜ್ಞಾನದ ಪರಿಣಾಮ) ಸ್ಥಾನವನ್ನು ಹೊಂದಿರುವ ವ್ಯಾಸ ವಾಲ್ಮೀಕಿ ಮೊದಲಾದ ವರಂತಹ ರೂಪದಿಂದ ಗುರುತಿಸಲ್ಪಡುವನು. ऋषि: विप्राणाम् ವೇದ ಪ್ರತಿಪಾದ್ಯ ವಾದ ವೈದಿಕ ಧರ್ಮ ಮಾರ್ಗಗಳಲ್ಲಿರುವ ಜ್ಞಾನಿಗಳಲ್ಲಿ ಗೋತ್ರ ಪ್ರವರ್ತಕರಾದ ಅತ್ರಿ, ಭೃಗು, ವಸಿಷ್ಠಾದಿಗಳಂತೆ ಸರ್ವೋತ್ಕೃಷ್ಟನಾಗಿರುವನು. 'महिषो मृगाणाम्' ಚತುಷ್ಪದಿಗಳಾದ ಪ್ರಾಣಿವರ್ಗದಲ್ಲಿ ಬಲಿಷ್ಠವೂ ಬಹೂಪಯೋಗಿಯಾಗಿರುವ ಮಹಿಷ ರೂಪವಾಗಿಯೂ ಇರುವನು. श्येनो घृघ्राणाम् ಹದ್ದೇ ಮೊದಲಾದ ಪಕ್ಷಿವರ್ಗದಲ್ಲಿ ಪ್ರಬಲವಾದ (श्येन) ಗಿಡುಗನಂತೆಯೂ, स्वधिति:वनानाम् ವೃಕ್ಷ ಸಮೂಹದಲ್ಲಿ ಅವುಗಳನ್ನೇ ನಾಶ ಪಡಿಸುವ ಗಂಡುಗೊಡಲಿಯಾಗಿಯೂ, सोम: पवित्रम्अत्येति रेभन् ಯಾಗ ಹೇತುಭೂತವಾದ ಸೋಮವಾಗಿಯೂ ಗಂಗಾಜಲ, ಕುಶ, ದರ್ಭಾದಿ ದ್ರವ್ಯಗಳಿಗಿಂತಲೂ ಪವಿತ್ರವಾಗಿ ಮಂತ್ರ ಶಬ್ದವಾಚ್ಯವಾಗಿದ್ದಾನೆ.

हंस:शुचिषइसुरन्तरिक्षसत्, होतावेदिषत्, अतिभिर्दुरोणसत् ।
नृषद्वरसत् ऋतसद्व्योमसत् अब्जागोजा ऋतजा अद्रिताऋतं बृहत्॥

ಜ್ಞಾನವೆಂಬ ವಿಶಿಷ್ಟ ಕಣ್ಣುಳ್ಳವನಿಗೆ ಈ ಜಗತ್ತೆಲ್ಲವೂ ಬ್ರಹ್ಮಸ್ವರೂಪವೇ ವಿವೇಕದಿಂದ ನೋಡುವವನಿಗೆ ಜಗತ್ತು ಬ್ರಹ್ಮರೂಪದಿಂದ ತೋರುವುದು. ಈ ಜಗತ್ತು ಸರ್ವದಾ ಗತಿಶೀಲವಾದುದರಿಂದ हंस: ಆದಿತ್ಯನು ಮೊದಲ್ಗೊಂಡು ಎಲ್ಲವೂ ಚಲನಶೀಲವಾದುದು. ಆದಿತ್ಯನು ಶುದ್ಧ ಜ್ಯೋತಿರ್ಮಂಡಲದಲ್ಲಿ ಚಲನವುಳ್ಳವನಾದ್ದರಿಂದ शुचिषत् ಎಲ್ಲದರಲ್ಲಿಯೂ ಆತ್ಮರೂಪದಲ್ಲಿ ವಾಸಕಾರಣನೂ ಆಗಿದ್ದಾನೆ. ಬ್ರಹ್ಮ ಸ್ವರೂಪದ वसु: ವಾಯುವು ಅಂತರೀಕ್ಷದಲ್ಲಿ (ಆಕಾಶದಲ್ಲಿ) ಗಮನಶೀಲವುಳ್ಳದ್ದಾಗಿ ಅಂತರಿಕ್ಷಸತ್ ಆಗಿದ್ದಾನೆ. होता वेदिषत् ಹೋಮ ನಿಷ್ಪಾದಕನಾದ (आहवनीय) ಆಹವನೀಯ ಮೊದಲಾದ (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ) ರೂಪದ ಹೋತೃ (ರೂಪ) ಅಗ್ನಿಯು ಸೋಮಯಾಗವೇ ಮೊದಲಾದ ಯಾಗಗಳ ಅಂಗಭೂತವಾದ ವೇದಿಕೆಯಲ್ಲಿ ಅಂತರ್ಗತನಾಗಿರುವುದರಿಂದ ವಾಯುವು ವೇದಿಷತ್, अतिथि: दुराणसत् ಅಮಾವಾಸ್ಯೆಯೇ ಮೊದಲಾದ ತಿಥಿಗಳ ಬಗೆಗೆ ಚಿಂತಿಸದೇ ಸೂಚಿಸದೇ ಭೋಜನಾರ್ಥಿಯಾಗಿ ಮನೆಮನೆಗಳಿಗೆ ಹೋಗುವ ಬೇರೆ ಪ್ರದೇಶದ ಅತಿಥಿಯು ಅತಿಥಿರೂಪದಲ್ಲಿ दुरोणेषु ಬೇರೆಯವರ ಮನೆಗಳಲ್ಲಿ ಅಂತರ್ಗತನಾಗುವುದರಿಂದ दुरोणसत् ಆಜಗದ್ರೂಪನಾದ (ಗತಿಶೀಲ) ಬ್ರಹ್ಮನು नृषत् ಮನುಷ್ಯರಲ್ಲಿ ವೃತ್ತಿ ಅಧಿಕಾರಿ ಮೊದಲಾದ ಜೀವಿಗಳ ಭೇದದಿಂದ ಇರುವನಾದುದರಿಂದ नृषत् ಅವನು. वरसत् ಶ್ರೇಷ್ಠವಾದ ಕಾಶೀ, ದ್ವಾರಾವತೀ ಮೊದಲಾದ ಕ್ಷೇತ್ರಗಳಲ್ಲಿ ಪೂಜನೀಯವಾದ ದೇವರೂಪದಲ್ಲಿ ಇರುವನಾದ್ದರಿಂದ ಅವನು 'ವರಸತ್' ಹೌದು. ऋतसत् - (ऋते-सत्ये) ಸತ್ಯದಲ್ಲಿ ಅಂದರೆ ವೈದಿಕ ಕರ್ಮಗಳಲ್ಲಿ ಫಲರೂಪದಲ್ಲಿ ಇರುವನಾದ್ದರಿಂದ ऋतसत्। व्योमसत् - ಆಕಾಶದಲ್ಲಿ ನಕ್ಷತ್ರ ರೂಪದಲ್ಲಿ ವ್ಯಾಪಿಸಿದ್ದಾನಾದ್ದರಿಂದ ಬ್ರಹ್ಮವು ವ್ಯೋಮಸತ್ अब्जा ಶಂಖ, ಮೊಸಳೆ ಮೊದಲಾದ ಜಲಚರಗಳ ರೂಪದಲ್ಲಿ ಹುಟ್ಟುವುದರಿಂದ ಅಬ್ಜ ಸ್ವರೂಪನು ಬ್ರಹ್ಮ गोजा: ಗೋವುಗಳಿಂದ ಹಾಲು ಮೊದಲಾದ ರೂಪದಲ್ಲಿ ಹುಟ್ಟುವುದರಿಂದ गोजा: । ऋतजा:, ऋत ಎಂದರೆ ಸತ್ಯವಚನ, ಆ ಸತ್ಯವಚನದಿಂದ ಕೀರ್ತಿಯು, ಆ ರೂಪದಲ್ಲಿ ಪ್ರಾದುರ್ಭಾವಗೊಳ್ಳುವನಾದ್ದರಿಂದ ऋतजा: । अद्रिजा: - अद्रि: ಪರ್ವತ, ಪರ್ವತಗಳ ದೆಸೆಯಿಂದ ವೃಕ್ಷಾದಿ ರೂಪಗಳಲ್ಲಿ ಅಭಿವ್ಯಕ್ತನಾಗುವುದರಿಂದ अद्रिजा: ಹೀಗೆ ಆದಿತ್ಯನಿಂದ ಮೊದಲ್ಗೊಂಡು ಹೇಳಲ್ಪಟ್ಟದೆಲ್ಲವೂ ಜಗತ್ತು ಸತ್ಯವೂ ಹೌದು, ಹೀಗೆ ಜ್ಞಾನಿಗಳ ದೃಷ್ಟಿಯಿಂದ ಸತ್ಯವಾಗಿ ತೋರುವ ಜಗತ್ತೆಲ್ಲವೂ ಬ್ರಹ್ಮವೇ ಆಗಿರುತ್ತದೆ.

**ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾತ್ ವಿಸೀಮತು ಸುರುಚೋ ವೇನ ಆವಃ।**
**ಸುಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚಯೋನಿ ಮಸತಶ್ಚ ವಿವಃ।**

ಸೂರ್ಯಸ್ತುತಿ : ಪ್ರಥಮಂ ಮೊಟ್ಟಮೊದಲಿಗೆ ಜಜ್ಞಾನಂ ಉತ್ಪನ್ನವಾದ ಈ ಸ್ವರ್ಣ ರೂಪದ ಸೂರ್ಯಬ್ರಹ್ಮವು ತುಂಬ ವ್ಯಾಪಕ ಹಾಗೂ ಮಹತ್ತಾದುದು. ರುಕ್ಮ (ಸ್ವರ್ಣ) ಸ್ವರೂಪದ ಸೂರ್ಯನು ಪುರಸ್ತಾತ್ - ಪೂರ್ವದ ದಿಕ್ಕಿನಲ್ಲಿ ಇದ್ದು ವೇನಃ ಸುಂದರನಾದ ಸೂರ್ಯನು, ಸೀಮತಃ - ಎಲ್ಲ ಎಲ್ಲೆಗಳಲ್ಲಿ ಸುರುಚಃ - ಅತ್ಯಂತ ಕಾಂತಿಯುತವಾದ ಕಿರಣಗಳನ್ನು, ಆವಃ - ಆವರಿಸಿದನು. ಅಸ್ಯ - ಈ ಸೂರ್ಯನ ಸ್ವರ್ಣ ವರ್ಣದಂತೆ ಕಂಗೊಳಿಸುತ್ತಾ, ವಿಷ್ಠಾ - ವಿಶೇಷವಾಗಿ ಇರುವಂತಹ ಕಾರಣದಿಂದ, ಬುಧ್ನಿಯಾ - ಬುಧ್ನ ಎಂದರೆ ಮೂಲ - ಈ ಮೂಲವಾದ ಪೃಥಿವೀ ರೂಪವಾಗಿರುವ ಪದಾರ್ಥಗಳನ್ನು ಕಮನೀಯ ಸ್ವರೂಪನು ವಿವಃ - ಪ್ರಕಾಶಗೊಳಿಸಿದನು.

**ಇಂದ್ರಿಯಾಣಿ ಶತಕ್ರತೋ ಯಾತೇ ಜನೇಷು ಪಂಚಸು।**
**ಇಂದ್ರತಾನಿತ ಆವೃಣೇ।**

ಎಲೈ ಶತಕ್ರತೋ! ಇಂದ್ರನೇ! ಪಂಚಸು ಜನೇಷು ವಿಷಾದ ಪಂಚಮಗಳಾದ ಬ್ರಾಹ್ಮಣಾದಿ ವರ್ಣಗಳಲ್ಲಿ ಯಾವ ನಿನ್ನ (ಸಂಬಂಧ) ಅನುಗ್ರಹದಿಂದ (ಇಂದ್ರಿಯ ಗಳು) (ಇಂದ್ರಿಯ-ಬಲ, ಅದು ಉಳ್ಳವನು ಇಂದ್ರಿಯಾಪಾನ್, ಹಾಲು, ಮೊಸರು, ತುಪ್ಪ, ಮೊದಲಾದವುಗಳಿಂದ ಇಂದ್ರಿಯಗಳು ವೃದ್ಧಿ ಹೊಂದಲು ಕಾರಣವಾಗಿರು ವುದರಿಂದ ಪಶುಗಳು ಇಂದ್ರಿಯತ್ವ ಧರ್ಮವುಳ್ಳವುಗಳು) ಇಂದ್ರಿಯಾಣಿ ಸಾಮರ್ಥ್ಯ ಗಳು ಇವೆಯೋ ಇಂದ್ರ - ಇಂದ್ರನೇ ತಾನಿ - ಆ ಎಲ್ಲವನ್ನು (ತೇ)-ನಿನ್ನ ಅನುಗ್ರಹ ದಿಂದ ಆವೃಣೇ - ಎಲ್ಲ ಕಡೆಯಿಂದಲೂ ತೆಗೆದುಕೊಳ್ಳುವೆನು. ಹೊಂದುವೆನು.

**ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಗ್ಂ, ಸುಶರ್ಮಾಣಂ**
**ಅದಿತಿಗ್ಂ ಸುಪ್ರಣೀತಿಮ್। ದೈವೀಂನಾವಗ್ಂ ಸ್ವರಿತ್ರಾಮನಾಗಸರು-**
**ಸ್ರವಂತೀ ಮಾರುಹೇಮಾಸ್ವಸ್ತಯೇ।**

ಸುತ್ರಾಮಾಣಂ - ತುಂಬ ಚೆನ್ನಾಗಿ ಕಾಪಾಡಿ ಪಾಲಿಸುವ, ಪೃಥಿವೀಂ - ವ್ಯಾಪಕವಾದ ಭೂಮಿಯನ್ನು, ದ್ಯಾಂ - ತುಂಬ ಪ್ರಕಾಶಮಾನವಾಗಿ ಕಾಣುತ್ತಿರುವ ಆಕಾಶವನ್ನು, ಅನೇಹಸಮ್ - ಚಿರಕಾಲ ಸ್ಥಾಯಿಯಾದ ಕಾಲವನ್ನು ದೈವೀಂ

ಜ್ಞಾನವೆಂಬ ವಿಶಿಷ್ಟ ಕಣ್ಣುಳ್ಳವನಿಗೆ ಈ ಜಗತ್ತೆಲ್ಲವೂ ಬ್ರಹ್ಮಸ್ವರೂಪವೇ ವಿವೇಕದಿಂದ ನೋಡುವವನಿಗೆ ಜಗತ್ತು ಬ್ರಹ್ಮರೂಪದಿಂದ ತೋರುವುದು. ಈ ಜಗತ್ತು ಸರ್ವದಾ ಗತಿಶೀಲವಾದುದರಿಂದ हंस: ಆದಿತ್ಯನು ಮೊದಲ್ಗೊಂಡು ಎಲ್ಲವೂ ಚಲನಶೀಲವಾದುದು. ಆದಿತ್ಯನು ಶುದ್ಧ ಜ್ಯೋತಿರ್ಮಂಡಲದಲ್ಲಿ ಚಲನವುಳ್ಳವನಾದ್ದರಿಂದ शुचिषत् ಎಲ್ಲದರಲ್ಲಿಯೂ ಆತ್ಮರೂಪದಲ್ಲಿ ವಾಸಕಾರಣನೂ ಆಗಿದ್ದಾನೆ. ಬ್ರಹ್ಮ ಸ್ವರೂಪದ वसु: ವಾಯುವು ಅಂತರೀಕ್ಷದಲ್ಲಿ (ಆಕಾಶದಲ್ಲಿ) ಗಮನಶೀಲವುಳ್ಳದ್ದಾಗಿ ಅಂತರಿಕ್ಷಸತ್ ಆಗಿದ್ದಾನೆ. होता वेदिषत् ಹೋಮ ನಿಷ್ಪಾದಕನಾದ (आहवनीय) ಆಹವನೀಯ ಮೊದಲಾದ (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ) ರೂಪದ ಹೋತೃ (ರೂಪ) ಅಗ್ನಿಯು ಸೋಮಯಾಗವೇ ಮೊದಲಾದ ಯಾಗಗಳ ಅಂಗಭೂತವಾದ ವೇದಿಕೆಯಲ್ಲಿ ಅಂತರ್ಗತನಾಗಿರುವುದರಿಂದ ವಾಯುವು ವೇದಿಷತ್, अतिथि: दुराणसत् ಅಮಾವಾಸ್ಯೆಯೇ ಮೊದಲಾದ ತಿಥಿಗಳ ಬಗೆಗೆ ಚಿಂತಿಸದೇ ಸೂಚಿಸದೇ ಭೋಜನಾರ್ಥಿಯಾಗಿ ಮನೆಮನೆಗಳಿಗೆ ಹೋಗುವ ಬೇರೆ ಪ್ರದೇಶದ ಅತಿಥಿಯು ಅತಿಥಿರೂಪದಲ್ಲಿ दुरोणेषु ಬೇರೆಯವರ ಮನೆಗಳಲ್ಲಿ ಅಂತರ್ಗತನಾಗುವುದರಿಂದ दुरोणसत् ಆಜಗದ್ರೂಪನಾದ (ಗತಿಶೀಲ) ಬ್ರಹ್ಮನು नृषत् ಮನುಷ್ಯರಲ್ಲಿ ವೃತ್ತಿ ಅಧಿಕಾರಿ ಮೊದಲಾದ ಜೀವಿಗಳ ಭೇದದಿಂದ ಇರುವನಾದುದರಿಂದ नृषत् ಅವನು. वरसत् ಶ್ರೇಷ್ಠವಾದ ಕಾಶೀ, ದ್ವಾರಾವತೀ ಮೊದಲಾದ ಕ್ಷೇತ್ರಗಳಲ್ಲಿ ಪೂಜನೀಯವಾದ ದೇವರೂಪದಲ್ಲಿ ಇರುವನಾದ್ದರಿಂದ ಅವನು 'ವರಸತ್' ಹೌದು. ऋतसत् - (ऋते-सत्ये) ಸತ್ಯದಲ್ಲಿ ಅಂದರೆ ವೈದಿಕ ಕರ್ಮಗಳಲ್ಲಿ ಫಲರೂಪದಲ್ಲಿ ಇರುವನಾದ್ದರಿಂದ ऋतसत्। व्योमसत् - ಆಕಾಶದಲ್ಲಿ ನಕ್ಷತ್ರ ರೂಪದಲ್ಲಿ ವ್ಯಾಪಿಸಿದ್ದಾನಾದ್ದರಿಂದ ಬ್ರಹ್ಮವು ವ್ಯೋಮಸತ್ अब्जा ಶಂಖ, ಮೊಸಳೆ ಮೊದಲಾದ ಜಲಚರಗಳ ರೂಪದಲ್ಲಿ ಹುಟ್ಟುವುದರಿಂದ ಅಬ್ಜ ಸ್ವರೂಪನು ಬ್ರಹ್ಮ गोजा: ಗೋವುಗಳಿಂದ ಹಾಲು ಮೊದಲಾದ ರೂಪದಲ್ಲಿ ಹುಟ್ಟುವುದರಿಂದ गोजा: । ऋतजा:, ऋत ಎಂದರೆ ಸತ್ಯವಚನ, ಆ ಸತ್ಯವಚನದಿಂದ ಕೀರ್ತಿಯು, ಆ ರೂಪದಲ್ಲಿ ಪ್ರಾದುರ್ಭಾವಗೊಳ್ಳುವನಾದ್ದರಿಂದ ऋतजा: । अद्रिजा: - अद्रि: ಪರ್ವತ, ಪರ್ವತಗಳ ದೆಸೆಯಿಂದ ವೃಕ್ಷಾದಿ ರೂಪಗಳಲ್ಲಿ ಅಭಿವ್ಯಕ್ತನಾಗುವುದರಿಂದ अद्रिजा: ಹೀಗೆ ಆದಿತ್ಯನಿಂದ ಮೊದಲ್ಗೊಂಡು ಹೇಳಲ್ಪಟ್ಟದೆಲ್ಲವೂ ಜಗತ್ತು ಸತ್ಯವೂ ಹೌದು, ಹೀಗೆ ಜ್ಞಾನಿಗಳ ದೃಷ್ಟಿಯಿಂದ ಸತ್ಯವಾಗಿ ತೋರುವ ಜಗತ್ತೆಲ್ಲವೂ ಬ್ರಹ್ಮವೇ ಆಗಿರುತ್ತದೆ.

**ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾತ್ ವಿಸೀಮತು ಸುರುಚೋ ವೇನ ಆವಃ।**
**ಸುಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚಯೋನಿ ಮಸತಶ್ಚ ವಿವಃ।**

ಸೂರ್ಯಸ್ತುತಿ : ಪ್ರಥಮಂ ಮೊಟ್ಟಮೊದಲಿಗೆ ಜಜ್ಞಾನಂ ಉತ್ಪನ್ನವಾದ ಈ ಸ್ವರ್ಣ ರೂಪದ ಸೂರ್ಯಬ್ರಹ್ಮವು ತುಂಬ ವ್ಯಾಪಕ ಹಾಗೂ ಮಹತ್ತಾದುದು. ರುಕ್ಮ (ಸ್ವರ್ಣ) ಸ್ವರೂಪದ ಸೂರ್ಯನು ಪುರಸ್ತಾತ್ - ಪೂರ್ವದ ದಿಕ್ಕಿನಲ್ಲಿ ಇದ್ದು ವೇನಃ ಸುಂದರನಾದ ಸೂರ್ಯನು, ಸೀಮತಃ - ಎಲ್ಲ ಎಲ್ಲೆಗಳಲ್ಲಿ ಸುರುಚಃ - ಅತ್ಯಂತ ಕಾಂತಿಯುತವಾದ ಕಿರಣಗಳನ್ನು, ಆವಃ - ಆವರಿಸಿದನು. ಅಸ್ಯ - ಈ ಸೂರ್ಯನ ಸ್ವರ್ಣ ವರ್ಣದಂತೆ ಕಂಗೊಳಿಸುತ್ತಾ, ವಿಷ್ಠಾ - ವಿಶೇಷವಾಗಿ ಇರುವಂತಹ ಕಾರಣದಿಂದ, ಬುಧ್ನಿಯಾ - ಬುಧ್ನ ಎಂದರೆ ಮೂಲ - ಈ ಮೂಲವಾದ ಪೃಥಿವೀ ರೂಪವಾಗಿರುವ ಪದಾರ್ಥಗಳನ್ನು ಕಮನೀಯ ಸ್ವರೂಪನು ವಿವಃ - ಪ್ರಕಾಶಗೊಳಿಸಿದನು.

**ಇಂದ್ರಿಯಾಣಿ ಶತಕ್ರತೋ ಯಾತೇ ಜನೇಷು ಪಂಚಸು।**
**ಇಂದ್ರತಾನಿತ ಆವೃಣೇ।**

ಎಲೈ ಶತಕ್ರತೋ! ಇಂದ್ರನೇ! ಪಂಚಸು ಜನೇಷು ವಿಷಾದ ಪಂಚಮಗಳಾದ ಬ್ರಾಹ್ಮಣಾದಿ ವರ್ಣಗಳಲ್ಲಿ ಯಾವ ನಿನ್ನ (ಸಂಬಂಧ) ಅನುಗ್ರಹದಿಂದ (ಇಂದ್ರಿಯಗಳು) (ಇಂದ್ರಿಯ-ಬಲ, ಅದು ಉಳ್ಳವನು ಇಂದ್ರಿಯಾವಾನ್, ಹಾಲು, ಮೊಸರು, ತುಪ್ಪ, ಮೊದಲಾದವುಗಳಿಂದ ಇಂದ್ರಿಯಗಳು ವೃದ್ಧಿ ಹೊಂದಲು ಕಾರಣವಾಗಿರುವುದರಿಂದ ಪಶುಗಳು ಇಂದ್ರಿಯತ್ವ ಧರ್ಮವುಳ್ಳವುಗಳು) ಇಂದ್ರಿಯಾಣಿ ಸಾಮರ್ಥ್ಯಗಳು ಇವೆಯೋ ಇಂದ್ರ - ಇಂದ್ರನೇ ತಾನಿ - ಆ ಎಲ್ಲವನ್ನು (ತೇ)-ನಿನ್ನ ಅನುಗ್ರಹದಿಂದ ಆವೃಣೇ - ಎಲ್ಲ ಕಡೆಯಿಂದಲೂ ತೆಗೆದುಕೊಳ್ಳುವೆನು. ಹೊಂದುವೆನು.

**ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಗ್ಂ, ಸುಶರ್ಮಾಣಂ**
**ಅದಿತಿಗ್ಂ ಸುಪ್ರಣೀತಿಮ್। ದೈವೀಂನಾವಗ್ಂ ಸ್ವರಿತ್ರಾಮನಾಗಸರು-**
**ಸ್ರವಂತೀ ಮಾರುಹೇಮಾಸ್ವಸ್ತಯೇ।**

ಸುತ್ರಾಮಾಣಂ - ತುಂಬ ಚೆನ್ನಾಗಿ ಕಾಪಾಡಿ ಪಾಲಿಸುವ, ಪೃಥಿವೀಂ - ವ್ಯಾಪಕವಾದ ಭೂಮಿಯನ್ನು, ದ್ಯಾಂ - ತುಂಬ ಪ್ರಕಾಶಮಾನವಾಗಿ ಕಾಣುತ್ತಿರುವ ಆಕಾಶವನ್ನು, ಅನೇಹಸಮ್ - ಚಿರಕಾಲ ಸ್ಥಾಯಿಯಾದ ಕಾಲವನ್ನು ದೈವೀಂ

ನಾವಯ್ - ಮನುಷ್ಯ ನಿರ್ಮಿತವಾದ ನೌಕೆಯು ಸಮುದ್ರದ ಮೇಲೆ ನಿಲ್ಲುವುದೋ ಹಾಗೆ ದೇವ ನಿರ್ಮಿತವಾದ ನೌಕೆಯು ಸಮುದ್ರದ ಮೇಲೆ ನಿಲ್ಲುವುದೋ ಹಾಗೆ ದೇವ ನಿರ್ಮಿತವಾದ ಭೂಮಿ ರೂಪದ ನೌಕೆಯು ಮಹಾಜಲದ ಮೇಲೆ ನಿಂತಿದೆ. ಅಂತಹ ಸ್ವರಿತ್ರಾಮ್, ಚೆನ್ನಾಗಿ ಶತ್ರುಗಳಿಂದ ಕಾಪಾಡುವ ಅವಾಗಸಂ - ಪಾಪರಹಿತವಾದ, ಅಸ್ರವಂತೀಮ್ - ದೋಷರಹಿತವಾದ ಭೂಮಿಯನ್ನು, ಸ್ವಸ್ತಯೇ - ಒಳಿತಿಗಾಗಿ ಕ್ಷೇಮಕ್ಕಾಗಿ ಅದಿತಿ ದೇವನನ್ನು ಕೂಡ ಆರುಹೇಮ - ಹೊಂದೋಣ.

**ಮಹಿಮೂಷು ಮಾತರಗ್ಂ ಸುವ್ರತಾನಾಂ ಮತಸ್ಯ ಪತ್ನೀಂ**

**ಅವಸೇ ಹುವೇಮ. ತುವಿಕ್ಷತ್ರಾಮ ಜರಂತೀಂ ಉರೂಚೀಗ್ಂ**

**ಸುಶರ್ಮಾಣಂ ಅದಿತಿಗ್ಂ ಸುಪ್ರಣೀತಿಮ್ ॥**

ಅದಿತಿ ದೇವತೆಯನ್ನೇ ಅವಸೇ ನಮ್ಮ ರಕ್ಷಣೆಗಾಗಿ. ಸುಹುವೇಮ - ಗೌರವದಿಂದ ಚೆನ್ನಾಗಿ ಆಹ್ವಾನಿಸೋಣ. ಆ ದೇವತೆ ಎಂತಹವಳು ಎಂದರೆ ಮಹೀಮ್ - ಮಹನೀಯಳು (ನ್ನು) ಸುವ್ರತಾನಾಂ (ಮಾತರಮ್) ಉತ್ತಮ ಕರ್ಮಗಳನ್ನುಳ್ಳ ಪುರುಷರಿಗೆ ಮಾತರಮ್, ತಾಯಿಯಂತೆ ಹಿತಕಾರಕಳೂ, ಋತಸ್ಯ ಪತ್ನೀಮ್ ಸತ್ಯದ ರಕ್ಷಕಳೂ ಆದ ಪ್ರಕೃತಿ ಸ್ವರೂಪಿಣಿಯಾದ (ಅದಿತಿಯನ್ನು) ತುವಿಕ್ಷತ್ರಾಮ್, ಅನೇಕ ರಾಜರುಗಳಿಂದ ಪಾಲಿಸಲ್ಪಟ್ಟು, ಅಜರಂತೀಮ್ ಯಾವಾಗಲೂ ಜರಾರಹಿತಳಾದ (ಮುಪ್ಪಿಲ್ಲದ) ಉರೂಚೀಮ್ - ತುಂಬ ವಿಸ್ತೀರ್ಣ ಪ್ರಭಾವವುಳ್ಳ, ಸುಶರ್ಮಾಣಮ್ ಉತ್ತಮವಾದ ಸುಖದಿಂದ ಕೂಡಿದ, ಸುಪ್ರಣೀತಮ್ ಉತ್ತಮವಾದ ಸುಖವಾಗುವ ಕರ್ಮಗಳ ಪ್ರೇರಕಳೂ ಆದ ಅದಿತಿ ದೇವತೆಯನ್ನು ಚೆನ್ನಾಗಿ ಆಹ್ವಾನಿಸೋಣ.

# ಆಕರ ಗ್ರಂಥಗಳು

೧. **ಅರುಣ ಮಂತ್ರಾರ್ಥ ಪ್ರಕಾಶಿಕ**
ಶ್ರೀ ಚಲ್ಲಾ ಲಕ್ಷ್ಮೀ ನರಸಿಂಹ ಶಾಸ್ತ್ರಿಗಳು
ಆರ್ಯಾನಂದ ಪ್ರೆಸ್, ಬಚ್ಚುಪೇಟ, ಮಚಲೀಪಟ್ಟಣ. (ಆ.ಪ್ರ.)

೨. **ಆರಣ್ಯಕಗಳು**
'ಪರಾಗ', ಸಮಾಜ ಪುಸ್ತಕಾಲಯ, ಧಾರವಾಡ.

೩. **ಉಪನಿಷತ್ ಪ್ರಕಾಶ**
ಶ್ರೀ ರಂ.ರಾ. ದಿವಾಕರ, ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.

೪. **ಕೃಷ್ಣ ಯಜುರ್ವೇದ** (ಸಂಪುಟ ೧ ಮತ್ತು ೨)
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ, ಬೆಂಗಳೂರು.

೫. **ಚತುರ್ವೇದ ಭಾಷ್ಯ ಭೂಮಿಕಾ**
ಮಹರ್ಷಿ ದಯಾನಂದ ಸರಸ್ವತೀ, ಆರ್ಯ ಸಮಾಜ, ಬೆಂಗಳೂರು.

೬. **ಮಂಕು ತಿಮ್ಮನ ಕಗ್ಗ**
ಡಿ.ವಿ. ಗುಂಡಪ್ಪ, 'ಕಾವ್ಯಾಲಯ', ಮೈಸೂರು.

೭. **ಮಹಾ ನಾರಾಯಣೋಪನಿಷತ್ ಭಾಷ್ಯ**
ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

೮. **ಸಸ್ವರ ವೇದ ಮಂತ್ರಾಃ**
ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು.

ನಾವಯ್ - ಮನುಷ್ಯ ನಿರ್ಮಿತವಾದ ನೌಕೆಯು ಸಮುದ್ರದ ಮೇಲೆ ನಿಲ್ಲುವುದೋ ಹಾಗೆ ದೇವ ನಿರ್ಮಿತವಾದ ನೌಕೆಯು ಸಮುದ್ರದ ಮೇಲೆ ನಿಲ್ಲುವುದೋ ಹಾಗೆ ದೇವ ನಿರ್ಮಿತವಾದ ಭೂಮಿ ರೂಪದ ನೌಕೆಯು ಮಹಾಜಲದ ಮೇಲೆ ನಿಂತಿದೆ. ಅಂತಹ ಸ್ವರಿತ್ರಾಮ್, ಚೆನ್ನಾಗಿ ಶತ್ರುಗಳಿಂದ ಕಾಪಾಡುವ ಅವಾಗಸಂ - ಪಾಪರಹಿತವಾದ, ಅಸ್ರವಂತೀಮ್ - ದೋಷರಹಿತವಾದ ಭೂಮಿಯನ್ನು, ಸ್ವಸ್ತಯೇ - ಒಳಿತಿಗಾಗಿ ಕ್ಷೇಮಕ್ಕಾಗಿ ಅದಿತಿ ದೇವನನ್ನು ಕೂಡ ಆರುಹೇಮ - ಹೊಂದೋಣ.

**ಮಹಿಮೂಷು ಮಾತರಗ್ಂ ಸುವ್ರತಾನಾಂ ಮತಸ್ಯ ಪತ್ನೀಂ**

**ಅವಸೇ ಹುವೇಮ. ತುವಿಕ್ಷತ್ರಾಮ ಜರಂತೀಂ ಉರೂಚೀಗ್ಂ**

**ಸುಶರ್ಮಾಣಂ ಅದಿತಿಗ್ಂ ಸುಪ್ರಣೀತಿಮ್ ॥**

ಅದಿತಿ ದೇವತೆಯನ್ನೇ ಅವಸೇ ನಮ್ಮ ರಕ್ಷಣೆಗಾಗಿ. ಸುಹುವೇಮ - ಗೌರವದಿಂದ ಚೆನ್ನಾಗಿ ಆಹ್ವಾನಿಸೋಣ. ಆ ದೇವತೆ ಎಂತಹವಳು ಎಂದರೆ ಮಹೀಮ್ - ಮಹನೀಯಳು (ನ್ನು) ಸುವ್ರತಾನಾಂ (ಮಾತರಮ್) ಉತ್ತಮ ಕರ್ಮಗಳನ್ನುಳ್ಳ ಪುರುಷರಿಗೆ ಮಾತರಮ್, ತಾಯಿಯಂತೆ ಹಿತಕಾರಕಳೂ, ಋತಸ್ಯ ಪತ್ನೀಮ್ ಸತ್ಯದ ರಕ್ಷಕಳೂ ಆದ ಪ್ರಕೃತಿ ಸ್ವರೂಪಿಣಿಯಾದ (ಅದಿತಿಯನ್ನು) ತುವಿಕ್ಷತ್ರಾಮ್, ಅನೇಕ ರಾಜರುಗಳಿಂದ ಪಾಲಿಸಲ್ಪಟ್ಟು, ಅಜರಂತೀಮ್ ಯಾವಾಗಲೂ ಜರಾರಹಿತಳಾದ (ಮುಪ್ಪಿಲ್ಲದ) ಉರೂಚೀಮ್ - ತುಂಬ ವಿಸ್ತೀರ್ಣ ಪ್ರಭಾವವುಳ್ಳ, ಸುಶರ್ಮಾಣಮ್ ಉತ್ತಮವಾದ ಸುಖದಿಂದ ಕೂಡಿದ, ಸುಪ್ರಣೀತಮ್ ಉತ್ತಮವಾದ ಸುಖವಾಗುವ ಕರ್ಮಗಳ ಪ್ರೇರಕಳೂ ಆದ ಅದಿತಿ ದೇವತೆಯನ್ನು ಚೆನ್ನಾಗಿ ಆಹ್ವಾನಿಸೋಣ.

# ಆಕರ ಗ್ರಂಥಗಳು

೧. **ಅರುಣ ಮಂತ್ರಾರ್ಥ ಪ್ರಕಾಶಿಕ**
ಶ್ರೀ ಚಲ್ಲಾ ಲಕ್ಷ್ಮೀ ನರಸಿಂಹ ಶಾಸ್ತ್ರಿಗಳು
ಆರ್ಯಾನಂದ ಪ್ರೆಸ್, ಬಚ್ಚುಪೇಟ, ಮಚಲೀಪಟ್ಟಣ. (ಆ.ಪ್ರ.)

೨. **ಆರಣ್ಯಕಗಳು**
'ಪರಾಗ', ಸಮಾಜ ಪುಸ್ತಕಾಲಯ, ಧಾರವಾಡ.

೩. **ಉಪನಿಷತ್ ಪ್ರಕಾಶ**
ಶ್ರೀ ರಂ.ರಾ. ದಿವಾಕರ, ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.

೪. **ಕೃಷ್ಣ ಯಜುರ್ವೇದ** (ಸಂಪುಟ ೧ ಮತ್ತು ೨)
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ, ಬೆಂಗಳೂರು.

೫. **ಚತುರ್ವೇದ ಭಾಷ್ಯ ಭೂಮಿಕಾ**
ಮಹರ್ಷಿ ದಯಾನಂದ ಸರಸ್ವತೀ, ಆರ್ಯ ಸಮಾಜ, ಬೆಂಗಳೂರು.

೬. **ಮಂಕು ತಿಮ್ಮನ ಕಗ್ಗ**
ಡಿ.ವಿ. ಗುಂಡಪ್ಪ, 'ಕಾವ್ಯಾಲಯ', ಮೈಸೂರು.

೭. **ಮಹಾ ನಾರಾಯಣೋಪನಿಷತ್ ಭಾಷ್ಯ**
ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

೮. **ಸಸ್ವರ ವೇದ ಮಂತ್ರಾಃ**
ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು.

## ತಿದ್ದುಪಡಿಗಳು

| ಪುಟ | ಸಾಲು | ಸರಿಯಾದ ಪದ |
|---|---|---|
| ಮುನ್ನುಡಿ | 6 | ಪೂರ್ವ ... ವ್ಯಾಧಿ |
| | 7 | ತಚ್ಛಾಂತಿಃ |
| | 24 | ನಾಗುತ್ತಾನೆ |
| ನಿವೇದನೆ | 26 | ಹೀಗೆ ! |
| ಮುಂದಿನ ಪುಟ | 21 | (ಹಸ್ತಸಾಮುದ್ರಿಕ ತಜ್ಞರು) |
| ಪ್ರಸ್ತಾವನೆ | 7 | ಹೊರತುಪಡಿಸಿ |
| ಹೋಮವಿಧಿ | 7 | ಪೂರ್ವಕ |
| | 7 | ಸಮ್ಯದ್ಧಿಮವಾಪ್ಯಥಂ |
| | 8 | ಗ್ರಹಾಃ |
| ತೃಚಕಲ್ಪ ಹೋಮ | 16 | ಭಾನುಭ್ಯಾಂ |
| 2ನೇ ಪುಟ | | |
| 3ನೇ ಪುಟ | 12 | ಭಾಸ್ಕರಾಭ್ಯಾಂ |
| ಸೌರಸೂಕ್ತ | | |
| 15 | 5 | ರಂಧಯನ್ಮೋ |
| | 13 | ದೇವೀಂ |
| 36 | 12 | ಬಣ್ಮಹಾಂ |
| 40 | 1 | ಮಹಾँ ಅಸಿ |
| 53 | 10 | ಸವಾಂ |
| ಅರುಣ ಪ್ರಶ್ನಃ | | |
| 6 | 6 | ವಿಧಾಸ್ಯತೇ |
| 40 | 2 | ಹಸ್ತ |
| 56 | 11 | ವಾತಧ್ರಾ |

| | | |
|---|---|---|
| 66 | | ಸುತ್ರಾಮಾಣಂ ಪೃಥಿವೀಂ<br>ದ್ಯಾಮನೇ ಹಸಗ್ಂ<br>ಸುಶರ್ಮಾಣಂ ಅದಿತಿಗ್ಂ<br>ಸುಪ್ರಣೀತಿಂ ।<br>ದೈವೀಂನಾವಗ್ಂ ಸ್ವಂತ್ರಾಮ<br>ಹಾಗಸ ರುಸ್ರವಂತೀ ಮಾರು<br>ಹೇಮಸ್ವಸ್ತಯೇ ॥ |
| 16 | 4 | ಆಂಕ್ತೇ |
| 20 | 4 | ಶ್ರಿತಾ |
| 20 | 14 | ಅತ್ಯೂರ್ಧ್ವಾ |
| 96 | 7 | ಸ್ವರ್ಲೋಽಗ್ನಿಃ |
| 126 | 5 | ತಂಧೀರಾಸಃ |
| 130 | 9 | ಕ್ರೌಂಜರಸಂ |
| 135 | 6 | ಬ್ರಾಹ್ಮಣಾ |

ಅನುವಾದ ಭಾಗ

| | | |
|---|---|---|
| 10 | 5 | ಶಿರಸ್ಸಿದ್ದಂತೆ |
| 21 | 19 | ಜೀವಿಗಳಿಗೆ |
| 23 | 8 | ಅಧಿದೇವತೆಯಾದ |
| | 15 | ಸಮಾನರು |
| 25 | 15 | ಹರಿಸುತ್ತಾರಾದಾದ್ದರಿಂದ |
| | 17 | ಸುಂದರ |
| 29 | 25 | ಸೂರ್ಯರ |
| 31 | 24 | ಮೂವರು |
| | 25 | ಸ್ವರ್ಣರ |
| 33 | 9 | ಮೇರು |
| | 17 | ಆಗ್ನೀಧ್ರರೆಂಬ |
| | 21 | ಪ್ರತಿಪಾದಿತ |

| | | |
|---|---|---|
| 39 | 13 | ವಿಷ್ಣು |
| | 21 | ಅನ್ನಾಹಾರಾದಿಗಳ |
| 41 | 19 | ಜಠರಾಗ್ನಿ |
| 43 | 7 | ವನ್ನೂ |
| 45 | 7 | ತಸ್ಶೈಪಾ |
| 47 | 14 | ಹನ್ನೊಂದು |
| 51 | 20 | ಮರುತ್ತುಗಳ |
| 55 | 23 | ತ್ರಿದೀರಿ |
| 61 | 11 | ಸೇಯಗ್ಂ |
| 63 | 15 | ದಿಂದ |
| 69 | 13 | ತೊರೆದೂ |
| 79 | 5 | ವಾಸನೆಯನ್ನು |
| 83 | 6 | ಕಾಂತಿಯು |
| | 15 | ಮಾರ್ತಂಡ |
| 87 | 4 | ಯೋಸೌತಪನ್ |
| 95 | 26 | ವಿಶ್ವತಸ್ವರೀ |
| 107 | 5 | ಉಪಾನುವಾಕ್ಯ |

**ಅನುಬಂಧ**

| | | |
|---|---|---|
| 1 | 23 | नृषद्वरसत् |
| 2 | 24 | ಪ್ರಾದುರ್ಭಾವ |
| 3 | 1 | ವಿಸೀಮತಃ |
| | 13 | ನಿಷಾದ |
| 4 | 2 | (ಎರಡು ಬಾರಿ ಮುದ್ರಿತವಾಗಿದೆ) |

**ರಕ್ಷಾಪುಟದ ಹಿಂಭಾಗ**

| | | |
|---|---|---|
| | 2 | ಚಕ್ಷುಷೇ |

# ಪುಸ್ತಕಗಳು ದೊರೆಯುವ ಸ್ಥಳ

**ಸಿ.ಎಸ್.ವಿ. ಜೋಯಿಸ್**

2ನೇ ಮುಖ್ಯರಸ್ತೆ, ವಿಜಯನಗರ, ತುಮಕೂರು-2.

**ಮು.ಲ. ರಂಗಭಟ್ಟ**

12ನೇ ಅಡ್ಡರಸ್ತೆ, ಎಸ್.ಐ.ಟಿ. ಮುಖ್ಯರಸ್ತೆ

ಸರ್ ಎಂ. ವಿಶ್ವೇಶ್ವರಯ್ಯ ಬಡಾವಣೆ, ತುಮಕೂರು-3.

**ಎಸ್. ಶ್ರೀನಿವಾಸ್**

'ಶ್ರೀ ಲಲಿತ', ಎಸ್ಸೆನ್ ಬ್ರದರ್ಸ್

ಉತ್ತರಾದಿ ಮಠ ಬೀದಿ, ಬೆಂಗಳೂರು-4.

**ಕೆ.ಎಲ್. ರಾಮಸ್ವಾಮಿ**

ಇಂಜಿನಿಯರ್, ಶ್ರೀರಾಮಪುರಂ,

ಮಾನಂದವಾಡಿ ರಸ್ತೆ, ಮೈಸೂರು-8.

## ಮುಂಬರುವ ನಮ್ಮ ಪ್ರಕಟಣೆಗಳು

[illegible]

**ಬೃಹಸ್ಪತಿ ಶಾಂತಿ ಪ್ರಯೋಗಃ**

**ಚಂಡಿಹೋಮ ವಿಧಿಃ**


ನಮಃ ಸವಿತ್ರೇ
ಜಗದೇಕ ಚಕ್ಷುಷೇ
ಜಗತ್ಪ್ರಸೂತಿ ಸ್ಥಿತಿನಾಶ ಹೇತವೇ ।
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ
ವಿರಿಂಚಿ ನಾರಾಯಣ
ಶಂಕರಾತ್ಮನೇ ॥